# ಅಚಲ

ತಿಂಗಳ ಪತ್ರಿಕೆ

ಮೇ 2002







ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 17 ಸಂಚಿಕೆ : 4-5

ಸಂಪಾದಕ ಮಂಡಲಿ

ಎನ್. ಗಾಯತ್ರಿ

ನೇಮಿಚಂದ್ರ, ದೇವಿ,

ಬಿ. ಎನ್. ಸುಮಿತ್ರಾಬಾಯಿ

ಶಾಂತಾನಾಗರಾಜ್

ಹೆಚ್. ಎನ್: ಗೀತಾ

ಹೇಮಲತಾ ಮಹಿಷಿ

ಪ್ರಕಾಶಕರು

ಜಾಗೃತಿ ಮಹಿಳಾ ಅಧ್ಯಯನ

ಕೇಂದ್ರ,

ಬೆಂಗಳೂರು

ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.

Achala - Edited by
Dr. N. Gayathri

Published by
Dr. G. Ramakrishna on
behalf of Jagruthi Mahila
Adhyayana Kendra

*Printed at*
Lipi Mudrana
**Bangalore - 560 004**


## 'ಗಾಂಧಿಬಂದ' ಓದಿದಮೇಲೆ

ಈ ಕಾದಂಬರಿ ದೊಡ್ಡ ಸದ್ದು ಮಾಡಬೇಕಿತ್ತು
ವೇದಿಕೆಗಳಲಿ, ಲೈಬ್ರರಿಗಳಲಿ, ಕಾಲೇಜಿನ ಒಳ ಹೊರಗೆ,
ಗೆಳೆಯ - ಗೆಳತಿಯರ ನಡುವೆ; ಕಡೆಗೆ
ಪ್ರತಿ ಮನದ ಮೂಲೆಯಲಿ
ಅನುರಣನಗೊಳ್ಳಬೇಕಿತ್ತು ಸದ್ದು!
ಪ್ರತಿಫಲಿಸಬೇಕಿತ್ತು ಬೆಳಕು!!
ಛೇ ಹಾಗಾಗುತ್ತಲಿಲ್ಲ
ಏನಾಗಿದೆ ಈ ಅಕ್ಷರ ಜಗತ್ತಿಗೆ ?
ಇಲ್ಲಿ ಮಾತಿರಲಿ ಡಂಗುರ, ಜಾಗಟೆ
ಗಂಟೆ ನಾದಗಳು ಸಹ ಯಾರ
ಕಿವಿ ಮುಟ್ಟುತ್ತಿಲ್ಲ.

ಹಿಂದೊಂದು ಯುಗವಿತ್ತು
ತಣ್ಣನೆಯ ಮೌನ ಯುಗ! ಅಲ್ಲಿ
ಕುವೆಂಪು, ಬೇಂದ್ರೆ, ಪುತಿನ
ಕಾರಂತರ ಪಿಸು ಮಾತುಗಳು
ಪ್ರತಿ ಮನದ ಮೂಲೆ ಮೂಲೆಗೆ
ಹೋಗಿ ತಲುಪುತ್ತಿತ್ತು ಬೆಚ್ಚಗೆ!
ತ್ರಿವೇಣಿ, ಸಾವಿತ್ರಮ್ಮ, ಇಂದಿರಾ
ಭೈರಪ್ಪ, ಅನುಪಮಾ, ವೈದೇಹಿ
ಎಲ್ಲ ಹಾಡಿದರಲ್ಲ
ಇನಿದನಿಯ ಭಾವಗೀತೆಗಳ
ಆಲಿಸಿತು ಆಪ್ತವಾಗಿ ಆ ಯುಗದ
ಮನಸುಗಳು!!!

ಇಂದೇನಾಗಿದೆ? ಓದೆಂಬ ಕ್ರಿಯೆಗೆ?
'ಗಾಂಧಿ ಬಂದ' ಎಂದರೂ ಸದ್ದಿಲ್ಲ ಬೆರಗಿಲ್ಲ
ಜಾಗತೀಕರಣವೋ ಮಹಾಯುದ್ಧವೋ
ಕೋಮುದ್ವೇಷವೋ ಏರಿದ ಬೆಲೆಯೋ
ಎಲ್ಲಿ ಚದುರಿದೆ ಬದುಕು?
ಗಾಂಧಿ, ರಾಮ, ಕೃಷ್ಣ, ಅಲ್ಲಾ, ಕ್ರಿಸ್ತ
ಯಾರು ಬಂದರೂ ಅಷ್ಟೆ ಆಲಿಸಲು
ಬಿಡುವಿಲ್ಲ!!

**- ಶಾಂತಾ ನಾಗರಾಜ್**

ಸಂಪಾದಕೀಯ

# ರಾಜಧರ್ಮದ ಸಂಸ್ಕೃತಿಯ ಪೈಶಾಚಿಕತೆ

ಕಳೆದ ಮೂರು ತಿಂಗಳುಗಳಿಂದ ಗುಜರಾತ್‌ನಲ್ಲಿ ನಡೆಯುತ್ತಿರುವ ವಿದ್ಯಮಾನಗಳು ಭಾರತದ ಆತಂಕಕಾರಿ ಭವಿಷ್ಯಕ್ಕೆ ಮುನ್ಸೂಚನೆಯೇ ಎಂಬುದನ್ನು ಎಲ್ಲ ಹೃದಯವಂತರೂ ಚಿಂತಿಸುವ ಕಾಲ ಈಗ ಬಂದಿದೆ. ತೊಂಭತ್ತರ ದಶಕ ಭಾರತದ ಸಂದರ್ಭದಲ್ಲಂತೂ ಅತ್ಯಂತ ಆಘಾತಕಾರಿ ಪರಿಣಾಮಗಳನ್ನುಂಟು ಮಾಡಿದ ಅವಧಿ. ಆರ್ಥಿಕ ಮತ್ತು ಧಾರ್ಮಿಕ ಫ್ಯಾಸಿಸಂಗಳೆರಡೂ ತೀವ್ರಗೊಂಡು ಜನರ ಬದುಕನ್ನು ನುಚ್ಚು ನೂರು ಮಾಡಿದ ಅವಧಿ. ಜಾಗತೀಕರಣ, ಗ್ಯಾಟ್ ಒಪ್ಪಂದಗಳಿಂದ ಆರಂಭವಾದ ವಿದೇಶೀ ಆಕ್ರಮಣ ದೇಶದ ಜನತೆಯ ಆರ್ಥಿಕ ಜೀವನಾಡಿಯನ್ನು ಅಲ್ಲಾಡಿಸಿದರೆ, ರಥಯಾತ್ರೆ, ಮಂದಿರ, ಮಸೀದಿ ವಿವಾದಗಳು ಜನಾಂಗೀಯ ದ್ವೇಷವನ್ನು ಹುಟ್ಟುಹಾಕಿ ಜನಸಾಮಾನ್ಯರ ನಿದ್ದೆ ಗೆಡಿಸಿದೆ ; ಬದುಕು ಘೋರವಾಗಿದೆ.

ಈ ದೇಶದ ಸಂಸ್ಕೃತಿಯ ಭಾಗವಾದ ಮತ್ತು ನಾಡುನುಡಿಗೆ ಅಪಾರ ಕಾಣಿಕೆ ಸಲ್ಲಿಸಿ ಸಾಂಸ್ಕೃತಿಕ ವೈವಿಧ್ಯತೆಯ ಶ್ರೀಮಂತಿಕೆಗೆ ಕಾರಣರಾದ ಅಲ್ಪಸಂಖ್ಯಾತರು ಇಂದು ತತ್ತರಿಸುವಂತಾಗಿದೆ. ಭಾರತದ ವಿಭಜನೆಯಾದಾಗಿನಿಂದ ಇಲ್ಲಿಯವರೆಗೆ ನಡೆದ ಕೋಮುಗಲಭೆಗಳೆಷ್ಟೋ! ಇಂತಹ ಸಂದರ್ಭದಲ್ಲಿ ಎರಡೂ ಕೋಮಿನವರು ತೊಂದರೆಗೀಡಾಗುತ್ತಿದ್ದರು. ಹಾಗೆಯೇ ರಾಜ್ಯಯಂತ್ರವು ಕಾನೂನು ಮತ್ತು ಶಾಂತಿಯ ಪಾಲನೆಗೆ ಧಾವಿಸಿ ಪರಿಸ್ಥಿತಿಯನ್ನು ಹತೋಟಿಗೆ ತರಲು ಪ್ರಯತ್ನಿಸುತ್ತಿತ್ತು. ಆದರೆ ಈ ಬಾರಿ ನಡೆದದ್ದೇ ಬೇರೆ. ಹಿಂದುತ್ವದ ಗುತ್ತಿಗೆ ಪಡೆದ ರಾಷ್ಟ್ರೀಯ ಸ್ವಯಂ ಸೇವಕ ಸಂಘ ಮತ್ತು ಭಜರಂಗ ಬಲದ ಪಡೆಗಳು ಗುಜರಾತಿನಲ್ಲಿ ಪೈಶಾಚಿಕ ನರ್ತನ ನಡೆಸಿದವು.. ಅದರ ಕೀಲಿಕೈ ರಾಜ್ಯದ ಮುಖ್ಯ ಮಂತ್ರಿ ಮೋದಿಯವರ ಕೈಯಲ್ಲಿದ್ದರೆ, ಕೇಂದ್ರ ಸರ್ಕಾರದ ಧರ್ಮರಕ್ಷೆ ಮೋದಿಯವರ ರಾಜಧರ್ಮದ ಪರವಾಗಿತ್ತು.

ಒಂದು ಜನಾಂಗವನ್ನೇ ನಿರ್ಮೂಲನ ಮಾಡಲು ಹೊರಾಟ ಗೋಧ್ರಾದ 'ಹಿಂದೂ' ವೀರರು ಆ ಕಾರ್ಯಕ್ಕೆ ಮುಖ್ಯವಾಗಿ ಆರಿಸಿಕೊಂಡದ್ದು ಮಹಿಳೆಯರನ್ನು ಮೆತ್ತು ಮಕ್ಕಳನ್ನು ಸಂತತಿಗೆ ಕಾರಣರಾದ ಮಾತೆಯರು ಮತ್ತು ಮಹಿಳೆಯರು ಧಾರ್ಮಿಕ ಫ್ಯಾಸಿಸ್ಟರ ಕೆಂಗಣ್ಣಿಗೆ ಬಿದ್ದದ್ದು ಮತ್ತು ಅವರ ದುಷ್ಟ ಕೃತ್ಯಗಳಿಗೆ ಬಲಿಯಾದದ್ದನ್ನು ನೋಡಿದರೆ ಯಾವುದು ಸಂಸ್ಕೃತಿ ಎಂದು ಮಾನವಂತರೆಲ್ಲಾ ಚಿಂತಿಸಬೇಕಾಗಿದೆ. ಭಾರತೀಯ ಸಂಸ್ಕೃತಿಯ ವಕ್ತಾರರಂತೆ ಮಾತನಾಡುವ ಭಾರತೀಯ ಜನತಾ ಪಕ್ಷದ ನಾಯಕರು, ಅವರ ಸೈನ್ಯ ಗುಜರಾತಿನಲ್ಲಿ ನಡೆಸಿದ ದಾಂಧಲೆಗೆ ಉತ್ತರ ಹೇಳಬೇಕಿದೆ. ಎಲ್ಲ ಹೆಂಗಸರನ್ನು ಮಾತೆಯರೆಂದು ಗೌರವಿಸುವ, ಸಂಬೋಧಿಸುವ ಸಂಘಿಗಳಿಗೆ ಬೇರೆ ಧರ್ಮದ ಮಾತೆಯರು ಲೈಂಗಿಕ ಸಾಧನಗಳಾಗಿ ಬಿಡುತ್ತಾರೆಯೇ? ಶಿಶುಹತ್ಯೆ ಮಹಾಪಾತಕವೆಂದು ಹೇಳುವ ಸಂಸ್ಕೃತಿಯ ವಕ್ತಾರರು ಬೇರೆ ಧರ್ಮದ ಮಹಿಳೆಯರ ಗರ್ಭ ಬಗೆದು ಶಿಶುವನ್ನು ಕೊಲ್ಲುವ ನೀಚ ಮಟ್ಟಕ್ಕೂ ಇಳಿಯಬಹುದಾದರೆ ಇವರು ಪ್ರತಿಪಾದಿಸುವ ಸಂಸ್ಕೃತಿಯ ಟೊಳ್ಳುತನವು ಬಯಲಾಗುತ್ತಿದೆ. ಪರಸ್ತ್ರೀಯರೆಲ್ಲ ಸೋದರಿಯರು ಎನ್ನುವ ಮಂತ್ರ ಬಾಯಲ್ಲಿ ಹೇಳುವವರು ಮುದುಕಿಯರು ಮತ್ತು ಬಾಲಕೀಯರೆಂದೆಣಿಸದೆ ಎಲ್ಲ ಹೆಂಗಸರ ಮೇಲೂ ಅತ್ಯಾಚಾರ ನಡೆಸುವ ಅಧಃಪತನದ ಮಟ್ಟಿಗೆ ಇಳಿಯುವುದಕ್ಕೆ ಯಾರ ಸಮ್ಮತಿ ಇದೆ? ಇದು ಯಾವ ರಾಜಧರ್ಮ? ಯಾವ ಭಯೋತ್ಪಾದನೆಗಿಂತ ಇದು ಕಮ್ಮಿಯಾದುದು, ಎಂದು ಆಶ್ಚರ್ಯವಾಗುತ್ತದೆ. ತ್ರಿಶೂಲ, ಕತ್ತಿಗಳನ್ನು ಹಿಡಿದು, ತಾವು ಹಿಂದುಗಳ ಪ್ರತಿನಿಧಿಗಳು, ನೇತಾರರು ಎಂದು ಸ್ವಯಂ ಘೋಷಿಸಿಕೊಂಡ ಈ ದಿವ್ಯ ಸಂಸ್ಕೃತಿಯ ವಕ್ತಾರರು ದೇಶದ ಹೊರಗಿನ ಭಯೋತ್ಪಾದಕರಿಗಿಂತ ಅತಿ ಭಯಂಕರರು.

ರಾಜಕೀಯವಾಗಿ ತಮ್ಮ ಅಸ್ತಿತ್ವವೊಂದು ಉಳಿದರೆ ಸಾಕು ಎನ್ನುವ ಬಿಜೆಪಿ ಪಕ್ಷ ತನ್ನ ಫ್ಯಾಸಿಸ್ಟ್ ನೀತಿಯ ಮೂಲಕ ನರಮೇಧ ನಡೆಸಿದ ನರೇಂದ್ರ ಮೋದಿಯ ಬೆನ್ನು ತಟ್ಟಿ ಅವನ ರಾಜಧರ್ಮಪಾಲನೆಯ ಯಶಸ್ಸಿಗೆ ಪ್ರಶಂಸಾಪತ್ರ ಕೊಟ್ಟಿರುವುದೇ ಈ ದೇಶದಲ್ಲಿ ಹೆಂಗಸರ ಅಸ್ತಿತ್ವ, ಭವಿಷ್ಯ ಎಂತಹ ಕೊಲೆಗಡುಕರ ಕೈಯಲ್ಲಿದೆ ಎಂಬ ಅಂಶವನ್ನು ಸ್ಪಷ್ಟಪಡಿಸುತ್ತದೆ. ಈ ಕೊಲೆಗಡುಕರ ದುಷ್ಟತಂತ್ರಗಳನ್ನು ಸದೆಬಡಿದು ಎಲ್ಲ ಶಾಂತಿಪ್ರಿಯ ಜನತೆಯೊಂದಿಗೆ ಪ್ರತಿಸಂಸ್ಕೃತಿಯನ್ನು , ಮನುಷ್ಯ ಪ್ರೀತಿಯನ್ನು ಬೆಳೆಸುವುದೇ ಇಂದು ಮಾನವತಾವಾದಿಗಳ ಮುಂದಿರುವ ಸವಾಲಾಗಿದೆ.

★ ★ ★

# ಮಹಿಳೆಯರ ದುಡಿಮೆ ಜಗತ್ತು ಮತ್ತು ಜಾಗತೀಕರಣ

- ಟಿ. ಆರ್. ಚಂದ್ರಶೇಖರ

*ಆವ ಬೀಜ ಬೀಳುವಲ್ಲಿ ಮೊಳೆ ಮುಖ ಹಿಂಬು*
*ಮುಂಚುಂಟೆ?*
*ನೀ ಮರೆದಲ್ಲಿ ನಾನರಿದಲ್ಲಿ ಬೇರೊಂದೊಡಲುಂಟೆ?*
*ಮೂಲ ನಷ್ಟವಾದಲ್ಲಿ ಅಂಕುರ ನಿಂದಿತ್ತು.*
*ಕೂಟಕ್ಕೆ ಸತಿಪತಿ ಎಂಬ ನಾಮವಲ್ಲದೆ*
*ಅರಿವಿಂಗೆ ಬೇರೊಂದೊಡಲುಂಟೆ?*
*ಬೇರೊಂದಡಿಯಿಡದಿರು*
*ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗವನರಿಯಬಲ್ಲಡೆ*

*ಆಯ್ದಕ್ಕಿ ಲಕ್ಕಮ್ಮ*

---

## ಪ್ರಸ್ತಾವನೆ

ಜಾಗತೀಕರಣವೆಂಬುದು ಇಂದು ಚರ್ಚೆಯ ಮುಂಚೂಣಿಯಲ್ಲಿರುವ ಒಂದು ವಿಷಯವಾಗಿದೆ. ಅದರ ಬಗ್ಗೆ ಮಾತನಾಡದಿರುವುದು ಸಾಧ್ಯವೇ ಇಲ್ಲ ಎನ್ನುವಂತಹ ಸ್ಥಿತಿ ನಿರ್ಮಾಣವಾಗಿದೆ. ಅದರಿಂದ ಉಂಟಾಗಿರುವ - ಉಂಟಾಗುತ್ತಿರುವ - ಉಂಟಾಗಲಿರುವ ಅಪಾಯಗಳನ್ನು ಕುರಿತಂತೆ ಬಿಸಿ ಬಿಸಿ ಮಾತುಕತೆ ನಡೆದಿದೆ. ಜಾಗತೀಕರಣದ ವಿರುದ್ಧ ಕೆಲವು ಸಂಘಟನೆಗಳು ಸಮರವನ್ನೇ ಸಾರಿವೆ. ಅದನ್ನು ಹೇಗೆ ಪ್ರತಿಭಟಿಸಬೇಕು-ಪ್ರತಿಬಂಧಿಸಬೇಕು ಎಂಬುದರ ಬಗ್ಗೆ ವಿಚಾರ ಸಂಕಿರಣಗಳು ಸಂಘಟನವಾಗುತ್ತಿವೆ. ಜಾಗತೀಕರಣ ವಿರೋಧಿಸದವರೇ ಇಲ್ಲ ಎನ್ನುವಂತಾಗಿದೆ. ಇಂದಿನ ಸಂದರ್ಭದಲ್ಲಿ ಜಾಗತೀಕರಣದ ವಿರುದ್ಧ ಮಾತನಾಡದಿರುವ ರಾಜಕೀಯ ಪಕ್ಷಗಳೇ ಇಲ್ಲ! ವಿಚಿತ್ರವೆಂದರೆ ಅಧಿಕಾರಕ್ಕೆ ಬಂದಾಗ ಅದನ್ನು ಜಾರಿಗೊಳಿಸದ ರಾಜಕೀಯ ಪಕ್ಷಗಳೂ ಇಲ್ಲ!

ಜಾಗತೀಕರಣವು ಅನೇಕ ಅನಾಹುತಗಳಿಗೆ ಕಾರಣವಾಗಿದೆ. ಮಹಿಳೆಯರ ಶೋಷಣೆಯು ಇದರಿಂದ ಉಲ್ಬಣಗೊಂಡಿದೆ. ಒಂದು ಬಗೆಯಲ್ಲಿ ಮಹಿಳೆಯರ ದೃಷ್ಟಿಯಿಂದ ಇದು 'ಬಾಣಲೆಯಿಂದ ಬೆಂಕಿ'ಗೆ ಎನ್ನುವಂತಾಗಿದೆ. ಇವೆಲ್ಲ ಸರಿ! ಆದರೆ ನಿಜವಾಗಿ ಆತಂಕ, ಸಮಸ್ಯೆಯಿರುವುದೆಲ್ಲಿ ಅಂದರೆ, ಜಾಗತೀಕರಣದ ನೆಪದಲ್ಲಿ ನಮ್ಮ ಸಮಾಜಕ್ಕೆ ವಿಶಿಷ್ಟವಾದ ಸಂಗತಿಗಳು, ಸಮಸ್ಯೆಗಳು ಮೂಲೆಗುಂಪಾಗುತ್ತಿವೆ. ಜಾಗತೀಕರಣವೇ ಮುಖ್ಯವಾಗಿ ನಮ್ಮದೇ ಉಳಿದ ಶತ್ರುಗಳು ಕಣ್ಣಿಗೆ ಕಾಣದಂತಾಗಿರುವ ಅಪಾಯ ಎದುರಾಗಿಬಿಟ್ಟಿದೆ. ಜಾಗತೀಕರಣವಿಲ್ಲದಿದ್ದರೆ ನಮ್ಮ ಮಹಿಳೆಯರ ದುಡಿಮೆ ಜಗತ್ತು ಈಗಿರುವ ಸ್ಥಿತಿಗಿಂತ ಉತ್ತಮವಾಗಿರುತ್ತಿತ್ತೆ? ಈ ಬಗೆಯ ಅನುಮಾನಗಳಿಗೆ ನಾವು ಉತ್ತರಗಳನ್ನು ಕಂಡುಕೊಳ್ಳಬೇಕಾಗಿದೆ. ಇಲ್ಲದಿದ್ದರೆ ಜಾಗತೀಕರಣದ ಮರೆಯಲ್ಲಿ ನಮ್ಮದೇ ಆದ ಅನಿಷ್ಟಗಳು ಮರೆಯಾಗಿ ಬಿಡುವ ಸಾಧ್ಯತೆ ಇದೆ.

ಜಾಗತೀಕರಣದಿಂದ ಉಂಟಾಗುತ್ತಿರುವ ದುಷ್ಪರಿಣಾಮಗಳನ್ನು ಗಮನದಲ್ಲಿಟ್ಟುಕೊಂಡು ನಮ್ಮ ಸಮಾಜದ ಸಂದರ್ಭದಲ್ಲಿ ಮಹಿಳೆಯರ ದುಡಿಮೆ ಜಗತ್ತು ಯಾವ ಸ್ವರೂಪದಲ್ಲಿದೆ? ಅಲ್ಲಿನ ತಾರತಮ್ಯದ ನೆಲೆಗಳು ಯಾವುವು? ಜಾಗತೀಕರಣದಿಂದ ಅಲ್ಲಿ ಯಾವ ಬಗೆಯ ಬದಲಾವಣೆಗಳಾಗುತ್ತಿವೆ? ಇವೇ ಮುಂತಾದ ಪ್ರಶ್ನೆಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ.

### ಭಾಗ - 1

ದುಡಿಮೆಯ ಜಗತ್ತಿನಲ್ಲಿ ಮಹಿಳೆಯರು ಕಣ್ಣಿಗೆ ಕಾಣುವುದಿಲ್ಲ, ಅವರು ಇನ್‌ವಿಜಿಬಲ್ ಆಗಿದ್ದಾರೆ ಎಂದು ಹೇಳಲಾಗುತ್ತಿದೆ. ದುಡಿಮೆ ಅನ್ನೋದು ಮಹಿಳೆಯರಿಗೆ ಸಂಬಂಧಿಸಿದ ಸಂಗತಿಯಲ್ಲ ಎನ್ನಲಾಗಿದೆ. ಅದು ಪುರುಷರ ಜಗತ್ತು ಎಂದು ಪ್ರತಿಪಾದಿಸಲಾಗುತ್ತಿದೆ. ದುಡಿಮೆಯ ಜಗತ್ತಿನಲ್ಲಿ ಪುರುಷರು ಮಾತ್ರ ನೋಡಲು ಸಿಗುತ್ತಾರೆ ಎಂದು ಹೇಳಲಾಗುತ್ತಿದೆ. ಈ ಬಗೆಯ ಅಭಿಪ್ರಾಯಗಳು ಸಮಾಜದಲ್ಲಿ ನೆಲೆಯೂರಿಬಿಟ್ಟಿವೆ. ಆದರೆ ದುಡಿಮೆಯ ಜಗತ್ತನ್ನು ಅತ್ಯಂತ ಸೂಕ್ಷ್ಮವಾಗಿ, ಪ್ರಜ್ಞಾಪೂರ್ವಕವಾಗಿ, ತೆರೆದ ಕಣ್ಣಿನಿಂದ ಪರೀಕ್ಷಿಸಿದರೆ ಅಲ್ಲಿ ಮಹಿಳೆಯರು ಅಪಾರ ಸಂಖ್ಯೆಯಲ್ಲಿ ಬೆವರು, ಕಣ್ಣೀರು, ರಕ್ತ ಹರಿಸುತ್ತಿರುವುದು ಕಂಡು ಬರುತ್ತದೆ. ಅದನ್ನು ನೋಡುವ 'ಕಣ್ಣು' ಬೇಕು, ಅದನ್ನು ತಿಳಿದುಕೊಳ್ಳುವ 'ಮನಸ್ಸು' ಬೇಕು. ನಮ್ಮ ಸಮಾಜದ ಸಂದರ್ಭದಲ್ಲಿ ಮಹಿಳೆಯರು, ಲಾಗಾಯ್ತಿನಿಂದಲೂ ಎಲ್ಲ ರೀತಿಯ ಕಸುಬು, ವೃತ್ತಿ, ಉದ್ಯೋಗ, ದುಡಿಮೆಗಳಲ್ಲಿ ತೊಡಗಿರುವುದು ಕಂಡುಬರುತ್ತದೆ. ಕುಂಬಾರಿಕೆಯಲ್ಲಿ ಅವರಿದ್ದಾರೆ. ನೇಯ್ಗೆಯಲ್ಲಿ ಅವರ ದುಡಿಮೆ ಅನಿವಾರ್ಯವೆನ್ನುವಷ್ಟು ಅಗಾಧವಾಗಿದೆ. ಕೃಷಿಯಲ್ಲಿ ಅವರದು ವೈವಿಧ್ಯಮಯವಾದ ದುಡಿಮೆಯಾಗಿದೆ. ನಿಜವಾಗಿ ಹೇಳಬೇಕೆಂದರೆ ಒಕ್ಕಲುವವರಲ್ಲಿ ಮಹಿಳೆಯರು ದುಡಿಮೆಯನ್ನು ಬದುಕುತ್ತಿದ್ದಾರೆ. ಹೈನುಗಾರಿಕೆಯಂತೂ ಅವರ ಮನಾಪಲಿ. ಕುರಿ-ಕೋಳಿ-ಹಂದಿ ಸಾಗಾಣಿಕೆಗಳಲ್ಲಿ ಅವರ ಪಾತ್ರ ತುಂಬಾ ಮಹತ್ವದ್ದಾಗಿದೆ. ಬುಟ್ಟಿ ಹೆಣೆಯುವುದು, ಚಾಪೆ ಮಾಡುವುದು, ಪರಕೆ ಕಟ್ಟುವುದು, ಕೌದಿ ಮಾಡುವುದು, ಬಟ್ಟೆ ಹೊಲಿಯುವುದು ಮಹಿಳೆಯರಿಗೆ ಮೀಸಲಾದ ಚಟುವಟಿಕೆಗಳಾಗಿವೆ. ಕಟ್ಟಡ ನಿರ್ಮಾಣ, ರಸ್ತೆ-ಸೇತುವೆ ಕಟ್ಟುವ ಕಾಮಗಾರಿಗಳಲ್ಲಿ ಅವರು ಅಪಾರ ಸಂಖ್ಯೆಯಲ್ಲಿದ್ದಾರೆ. ಈ ಎಲ್ಲ ವೃತ್ತಿ-ಕಸುಬು-ಉದ್ಯೋಗಗಳಿಗೆ ಸಂಬಂಧಿಸಿದಂತೆ 'ದುಡಿಮೆ'ಯಲ್ಲಿ ಮಹಿಳೆಯರಿದ್ದಾರೆ. ದುಡಿಮೆಯ ಯಾವ ಕ್ಷೇತ್ರದಲ್ಲಿ ಮಹಿಳೆಯರಿಲ್ಲ ಎಂಬುದು ನಿಜವಾಗಿ ಕೇಳಬೇಕಾಗಿರುವ ಪ್ರಶ್ನೆಯಾಗಿದೆ.

## ತಾರತಮ್ಯದ ವಿಶ್ವರೂಪ

ದುಡಿಮೆ ಜಗತ್ತಿನಲ್ಲಿ ಮಹಿಳೆಯರು ಕಣ್ಣಿಗೆ ಕಾಣುವುದಿಲ್ಲ, ಅವರು ಇನ್‌ವಿಜಿಬಲ್ ಆಗಿದ್ದಾರೆ ಎಂಬುದೇ ಮೊದಲನೆಯ ತಾರತಮ್ಯ. ಮಹಿಳೆಯರ ದುಡಿಮೆಯನ್ನು ದುಡಿಮೆಯೆಂದು, ಮಹಿಳೆಯರನ್ನು ದುಡಿಮೆಗಾರರೆಂದು ಪರಿಗಣಿಸದಿರುವುದು ಮತ್ತೊಂದು ತಾರತಮ್ಯ. ಕೆಲವು ಬಗೆಯ ದುಡಿಮೆಯನ್ನು ಮಹಿಳೆಯರು ನಿಭಾಯಿಸಲು ಸಾಧ್ಯವಿಲ್ಲವೆನ್ನುವುದು ಇನ್ನೊಂದು ತಾರತಮ್ಯ. ಅವರ ದುಡಿಮೆಯು ಕೇವಲ ಮನೆವಾರ್ತೆ ಸಂಗೋಪನೆಗಳಿಗೆ ಮೀಸಲು ಎಂಬುದು ಮಗದೊಂದು ತಾರತಮ್ಯ. ಸಂಪಾದನೆಯು ಮಹಿಳೆಯರ ಕಾರ್ಯಕ್ಷೇತ್ರವಲ್ಲವೆಂಬುದೂ ತಾರತಮ್ಯವೇ ಆಗಿದೆ. ಒಂದೇ ಬಗೆಯ ದುಡಿಮೆಗೆ ಪುರುಷರಿಗೆ ಅಧಿಕಕೂಲಿ, ಮಹಿಳೆಯರಿಗೆ ಕಡಿಮೆ ಕೂಲಿ ನೀಡುವುದು ಮಹಾತಾರತಮ್ಯ. ಕುಟುಂಬದ, ಗಂಡನ, ಮಕ್ಕಳ ಏಳಿಗೆಗಾಗಿಯೇ ಹಗಲೂ-ಇರುಳೂ, ಪುರುಸೊತ್ತಿಲ್ಲದಂತೆ, ತಾಯಿಯ ಗರ್ಭದಿಂದ ಹೊರಬಂದಾಗಿನಿಂದ ಭೂಮಿಯ ಗರ್ಭ ಸೇರುವವರೆಗೆ ದುಡಿದರೂ ಅವರನ್ನು ದುಡಿಮೆಗಾರರೆಂದು ಪರಿಗಣಿಸದಿರುವುದು, ಕುಟುಂಬದ ವರಮಾನಕ್ಕೆ ಅವರ ಕಾಣಿಕೆ ಏನೂ ಇಲ್ಲವೆನ್ನುವುದು, ಅವರು ಸಂಪಾದನೆಗಾರರಲ್ಲವೆನ್ನುವುದು ಆಚಾರ್ಯ ಸದೃಶ ತಾರತಮ್ಯವಾಗಿದೆ. ಇದು ಮಹಿಳೆಯರ ಕೆಲಸ, ಇದು ಪುರುಷರ ಕೆಲಸವೆಂದು ವರ್ಗೀಕರಣ ಮಾಡಿರುವುದು ತಾರತಮ್ಯ. ದುಡಿಮೆಯ ಜಗತ್ತಿನಲ್ಲಿ ಮಹಿಳೆಯರು ಅನುಭವಿಸುತ್ತಿರುವ ತಾರತಮ್ಯಕ್ಕೆ ಸಾವಿರ ಕಣ್ಣುಗಳು, ಸಾವಿರ ಕೈಗಳು, ಸಾವಿರ ತಲೆಗಳು, ಈ ತಾರತಮ್ಯದ ವಿಶ್ವರೂಪ ದರ್ಶನವಾಗಬೇಕೆಂದರೆ ಮೊದಲೆ ತಿಳಿಸಿರುವಂತೆ ನೋಡುವ 'ಕಣ್ಣು' ಬೇಕು, ತಿಳಿದುಕೊಳ್ಳುವ ಮನಸ್ಸು ಬೇಕು.

## ಬೆವರು - ಕಣ್ಣೀರು - ರಕ್ತ

ಮಹಿಳೆಯರ ದುಡಿಮೆಯನ್ನು ಮೂರು ಬಗೆಗಳಾಗಿ ವರ್ಗೀಕರಿಸಬಹುದು.

1. ಉತ್ಪಾದನಾ ದುಡಿಮೆ
2. ಮನೆವಾರ್ತೆ ದುಡಿಮೆ
3. ಸಂತಾನೋತ್ಪತ್ತಿ ದುಡಿಮೆ

ಉತ್ಪಾದನಾ ದುಡಿಮೆಯ ಬೆವರನ್ನು, ಮನೆವಾರ್ತೆ ದುಡಿಮೆಯು ಕಣ್ಣೀರನ್ನು ಹಾಗೂ ಸಂತಾನೋತ್ಪತ್ತಿ ದುಡಿಮೆಯು ರಕ್ತವನ್ನು ಪ್ರತಿನಿಧಿಸುತ್ತವೆ. ಈ ಮೂರು ಸಂಗತಿಗಳನ್ನು ಒಳಗೊಂಡ ಮಹಿಳೆಯರ ದುಡಿಮೆಯು ಪುರುಷರ ದುಡಿಮೆಗಿಂತ ಪ್ರಮಾಣದಲ್ಲಿ ಅಧಿಕವಾದುದಾಗಿದೆ. ಈ ಮೂರು ಬಗೆಯ ದುಡಿಮೆಗಳನ್ನು ಬದುಕುವ ಮಹಿಳೆಯರು ಪ್ರತಿದಿನ ಎರಡು ದುಡಿಮೆ ದಿನಗಳನ್ನು ಬದುಕುತ್ತಿದ್ದಾರೆ. ಎಂಟು ಗಂಟೆಗಳ ದುಡಿಮೆಯನ್ನು ಕಾರ್ಮಿಕ ಕಾನೂನು ಒಂದು 'ದುಡಿಮೆ ದಿನ'ವೆಂದು ಮನ್ನಿಸುತ್ತದೆ. ಪ್ರತಿದಿನ ಮಹಿಳೆಯರು 15ರಿಂದ 16 ಗಂಟೆಗಳ ಕಾಲ ದುಡಿಯುತ್ತಾರೆ. ಮಹಿಳೆಯರ ಒಂದು ದಿನದ ದುಡಿಮೆಯು 'ಎರಡು ದುಡಿಮೆದಿನ'ಗಳಿಗೆ ಸಮವಾಗಿದೆ. ಮಹಿಳೆಯರ ದುಡಿಮೆ ಜಗತ್ತಿನ ವ್ಯಾಪ್ತಿ ಪ್ರಮಾಣ ಪುರುಷರ ದುಡಿಮೆ ಜಗತ್ತಿನ ವ್ಯಾಪ್ತಿ ಹಾಗೂ ಪ್ರಮಾಣಕ್ಕಿಂತ ಅದೆಷ್ಟೋ ಪಟ್ಟು ಅಧಿಕವಾದುದಾಗಿದೆ.

## ಉತ್ಪಾದನಾ ದುಡಿಮೆ

ಇದಕ್ಕೆ ಸಂಬಂಧಿಸಿದಂತೆ ಮಹಿಳೆಯರು ಪುರುಷರಿಗೆ ಸರಿಸಮನಾಗಿ ದುಡಿಯುತ್ತಿದ್ದಾರೆ. ಹೊಲ-ಗದ್ದೆ-ತೋಟಗಳಲ್ಲಿ, ಕಾರ್ಖಾನೆ-ಕಛೇರಿಗಳಲ್ಲಿ, ಗಣಿಗಳಲ್ಲಿ-ಕಾಮಗಾರಿಗಳಲ್ಲಿ ಪುರುಷರಂತೆ ಮಹಿಳೆಯರೂ ಕೂಡ ಬೆವರು ಹರಿಸುತ್ತಿದ್ದಾರೆ. ಆದರೆ ಇಲ್ಲಿನ ದುಡಿಮೆಗೆ ಮಹಿಳೆಯರಿಗೆ ದೊರಕುವ ಕೂಲಿಯು ಪುರುಷರಿಗೆ ದೊರಕುವ ಕೂಲಿಗಿಂತ ಕಡಿಮೆಯಾಗಿದೆ. ಸಂಘಟಿತ-ಸರ್ಕಾರಿ ವಲಯದಲ್ಲಿ ವೇತನಕ್ಕೆ ಸಂಬಂಧಿಸಿದಂತೆ ಲಿಂಗ ತಾರತಮ್ಯವನ್ನು ತೊಡೆದುಹಾಕಲಾಗಿದೆ. ಆದರೆ ಅನೌಪಚಾರಿಕ-ಅಸಂಘಟಿತ-ಖಾಸಗಿವಲಯದಲ್ಲಿ ಮಹಿಳೆಯರಿಂದ ಅಧಿಕೃತ ಕಾಲಾವಧಿಗಿಂತ ಹೆಚ್ಚು ದುಡಿಸಿಕೊಳ್ಳಲಾಗುತ್ತಿದೆ. ಆದರೆ ಕೂಲಿ ನೀಡುವುದರಲ್ಲಿ ಅವರಿಗೆ ಅನ್ಯಾಯ ಮಾಡಲಾಗುತ್ತಿದೆ. ಮಹಿಳೆಯರು ಹರಿಸುವ ಬೆವರಿಗೆ ಬೆಲೆ ಕಡಿಮೆ. ದುಡಿಯುವ ಕೂಲಿಕಾರ ಮಹಿಳೆಯರಲ್ಲಿ ಮುಕ್ಕಾಲು ಮೂರುವೀಸೆ ಪಾಲಿಗಿಂತ ಅಧಿಕ ಅಸಂಘಟಿತ ವಲಯದಲ್ಲಿದ್ದಾರೆ.

## ಮನೆ ವಾರ್ತೆ ದುಡಿಮೆ

ಮನೆವಾರ್ತೆ ದುಡಿಮೆಗೆ ಸಂಬಂಧಿಸಿದಂತೆ ಯಾವುದೇ ಬಗೆಯ ಲಿಂಗ ಸಂಬಂಧಿ ಶ್ರಮ ವಿಭಜನೆಯಿಲ್ಲದಿದ್ದರೂ ಅದನ್ನು ಮಹಿಳೆಯರಿಗೆ ಮಾತ್ರ ಮೀಸಲಿಡಲಾಗಿದೆ. ಮನೆವಾರ್ತೆ ಹಾಗೂ ಸಂಗೋಪನಾ ದುಡಿಮೆಗಳನ್ನು ದುಡಿಮೆಯೆನ್ನುವುದಕ್ಕೆ ಬದಲಾಗಿ ಜೈವಿಕ ಚಟುವಟಿಕೆಗಳು ಎಂದು ಪರಿಗಣಿಸಲಾಗಿದೆ. ಆದ್ದರಿಂದ ಅವು ಮಹಿಳೆಯರಿಗೆ ನಿರ್ದಿಷ್ಟವಾದ ಚಟುವಟಿಕೆಗಳಾಗಿವೆ. ಇವು ಜೈವಿಕ ನಿಯತಿಯಿಂದ ನಿರ್ಧರಿಸಲ್ಪಟ್ಟಿವೆ ಎಂದು ಹೇಳಲಾಗಿದೆ. ಮನೆವಾರ್ತೆ ಹಾಗೂ ಸಂಗೋಪನಾ ಚಟುವಟಿಕೆಗಳ ಹಿಂದೆ ಜೈವಿಕ ನಿಯತಿ ಕೆಲಸ ಮಾಡುತ್ತಿದೆ ಎಂಬುದು ಪುರುಷಶಾಹಿ ಕಟ್ಟಿದ ಒಂದು ರಾಜಕಾರಣವಾಗಿದೆ. ಮನೆವಾರ್ತೆ ಹಾಗೂ ಸಂಗೋಪನಾ ದುಡಿಮೆಯನ್ನು ಮಹಿಳೆಯರಿಗೆ ನಿರ್ದಿಷ್ಟಪಡಿಸಿದ ರಾಜ ಕಾರಣದ ಹಿಂದೆ ಸಾಮಾಜಿಕ ಸಂಗತಿಯು ಕೆಲಸ ಮಾಡುತ್ತಿರುವುದನ್ನು ನಾವು ಗುರುತಿಸಬೇಕಾಗಿದೆ. ತಾರತಮ್ಯ ಹಾಗೂ ದಬ್ಬಾಳಿಕೆಯಿಂದ ನಿರ್ದೇಶಿಸಲ್ಪಡುತ್ತಿರುವ ಮನೆವಾರ್ತೆ ಹಾಗೂ ಸಂಗೋಪನಾ ಚಟುವಟಿಕೆಗಳನ್ನು ನಿಭಾಯಿಸುತ್ತಿರುವ ಮಹಿಳೆಯರು ಕಣ್ಣೀರು ಹರಿಸುತ್ತಿದ್ದಾರೆ.

## ಸಂತಾನೋತ್ಪತ್ತಿ ದುಡಿಮೆ

ಮನೆವಾರ್ತೆ ದುಡಿಮೆಯಂತೆ ಸಂತಾನೋತ್ಪತ್ತಿ ದುಡಿಮೆಯನ್ನು ಜೈವಿಕ ನಿಯತಿ ಆಧಾರದ ಮೇಲೆ ಮಹಿಳೆಯರಿಗೆ ನಿರ್ದಿಷ್ಟ ಪಡಿಸಲಾಗಿದೆ. ಸಂತಾನೋತ್ಪತ್ತಿ ದುಡಿಮೆಯಲ್ಲಿ ಎರಡು ಹಂತಗಳನ್ನು ಗುರುತಿಸಬಹುದಾಗಿದೆ. ಮೊದಲನೆಯದು ಒಂಬತ್ತು ತಿಂಗಳು ಹೊಟ್ಟೆಯಲ್ಲಿಟ್ಟುಕೊಂಡು ತನ್ನ ರಕ್ತವನ್ನು ಕೊಟ್ಟು ಹೊಸದೊಂದು ಜನ್ಮಕ್ಕೆ ಜೀವ ಕೊಡುವ ಕ್ರಿಯೆಯು ಲಿಂಗ ನಿರ್ದಿಷ್ಟವಾದುದಾಗಿದೆ. ಆದರೆ ಜನ್ಮ ನೀಡಿದ ಮೇಲೆ ಮಗುವಿನ ಪಾಲನೆ - ಪೋಷಣೆಯ ದುಡಿಮೆಯು ಲಿಂಗ ನಿರ್ದಿಷ್ಟವಾದುದಲ್ಲ. ಆದರೆ ಪುರುಷಶಾಹಿಯು ಸಂತಾನೋತ್ಪತ್ತಿ ದುಡಿಮೆಯನ್ನು ಮಹಿಳೆಯರಿಗೆ ನಿರ್ದಿಷ್ಟಪಡಿಸಿದೆ ಹಾಗೂ ಅದನ್ನು ಮಹಿಳೆಯರಿಗೆ ಕಡ್ಡಾಯವನ್ನಾಗಿ ಮಾಡಲಾಗಿದೆ. ಈ ದುಡಿಮೆಯನ್ನು ನಿರ್ವಹಿಸುತ್ತಿರುವ ಮಹಿಳೆಯರು ರಕ್ತ ಹರಿಸುತ್ತಿದ್ದಾರೆ.

ಉತ್ಪಾದನಾ ದುಡಿಮೆಯ ಜೊತೆ ಮನೆವಾರ್ತೆ, ಸಂಗೋಪನಾ ಹಾಗೂ ಸಂತಾನೋತ್ಪತ್ತಿ ದುಡಿಮೆಗಳನ್ನು ನಿರ್ವಹಿಸುತ್ತಿರುವ ಮಹಿಳೆಯರು ಬೆವರು - ಕಣ್ಣೀರು - ರಕ್ತ ಹರಿಸುತ್ತಿದ್ದಾರೆ. ಅವರ ಬದುಕು ಜರ್ಜರಿತಲಾಗಿದೆ. ಇಷ್ಟಾದರೂ ಅವರ ದುಡಿಮೆಯು ದುಡಿಮೆಯೆನಿಸಿಕೊಳ್ಳುತ್ತಿಲ್ಲ. ಅವರು ದುಡಿಮೆಗಾರರೆಂದು ಪರಿಗಣಿಸಲಾಗಿಲ್ಲ.

## ಜೈವಿಕ ನಿಯತಿ - ಸಾಮಾಜಿಕ ಸಂಗತಿ

ಸುಮಾರು 800 ವರ್ಷಗಳ ಹಿಂದೆ ವಚನ ಚಳುವಳಿಯ ಸಂದರ್ಭದಲ್ಲಿ ಲಿಂಗ ಸಂಬಂಧಗಳ ಜೈವಿಕ ನಿಯತಿ ಸೂತ್ರವನ್ನು ಪ್ರಶ್ನಿಸಿದ - ತಿರಸ್ಕರಿಸಿದ ಧಿಕ್ಕರಿಸಿದ ಐತಿಹಾಸಿಕ ಪರಂಪರೆ ಕರ್ನಾಟಕಕ್ಕಿದೆ. ಈ ಪ್ರಬಂಧದ ಆರಂಭದಲ್ಲಿ ನೀಡಿರುವ ವಚನದಲ್ಲಿ ಆಯ್ದಕ್ಕಿ ಲಕ್ಕಮ್ಮನು ಲಿಂಗ ಸಂಬಂಧಗಳು ಜೈವಿಕ ನಿಯತಿ ನೆಲೆಗಳನ್ನು ತಿರಸ್ಕರಿಸಿದ ಇತಿಹಾಸವು ನಮಗಿದೆ. ಮಹಿಳೆ ಹಾಗೂ ಪುರುಷ ಕೂಟಕ್ಕೆ ಸತಿಪತಿಗಳಾಗಿದ್ದಾರೆ. ಇದು ಸಾಮಾಜಿಕವಾಗಿ ಮಾಡಿಕೊಂಡ ಒಂದು ವ್ಯವಸ್ಥೆ. ಕೂಟಕ್ಕೆ ಸತಿ-ಪತಿಗಳು, ಆದರೆ ಅರಿವಿಗೆ-ಜ್ಞಾನಕ್ಕೆ ಲಿಂಗ ಸಂಬಂಧಗಳ ಸಂಗತಿಗಳು ಸರಿಸಮಾನವಾಗಿರುವುದನ್ನು ಕಾಣಬಹುದು.

ಮಹಿಳೆಯರು ಮತ್ತು ಪುರುಷರ ನಡುವೆ ಜೈವಿಕ ಭಿನ್ನತೆಗಳಿವೆ. ಈ ಭಿನ್ನತೆಗಳ ನಡುವಿನ ಸಂಬಂಧ 'ಅಸಮ'ವಾದುದಲ್ಲ. ಲಿಂಗ ಸಂಬಂಧಗಳಲ್ಲಿನ ಅಸಮಾನತೆ ಹಿಂದೆ ಸಾಮಾಜಿಕ ಸಂಗತಿಗಳು ಕೆಲಸ ಮಾಡಿರುವ ನಿದರ್ಶನಗಳೂ ಇವೆ. ಲಿಂಗ ಸಂಬಂಧಗಳಲ್ಲಿ ಭಿನ್ನತೆ ನಾವು ಒಪ್ಪಿಕೊಳ್ಳಬಹುದು. ಆದರೆ ಅಲ್ಲಿನ ಅಸಮಾನತೆ - ಅಧಿಕಾರದ ಏಕಸ್ವಾಮ್ಯಗಳನ್ನು ಅರ್ಥಮಾಡಿಕೊಳ್ಳುವುದು ಕಷ್ಟ.

## ದುಡಿಮೆಯ ಜಗತ್ತಿನಲ್ಲಿ ಮಹಿಳೆಯರ ಸಂದಣಿ

ದುಡಿಮೆಯ ಜಗತ್ತಿನಲ್ಲಿ ಮಹಿಳೆಯರು ಹೇಗೆ ಸಂದಣಿಸಿದ್ದಾರೆ ಎಂಬುದನ್ನು ಕರ್ನಾಟಕಕ್ಕೆ ಸಂಬಂಧಿಸಿದಂತೆ ಇಲ್ಲಿ ಚರ್ಚಿಸಲಾಗಿದೆ. ದುಡಿಯುವ ವರ್ಗಕ್ಕೆ ಸಂಬಂಧಿಸಿದ 2001ರ ಜನಗಣತಿ ಮಾಹಿತಿ ಇನ್ನೂ ದೊರೆತಿಲ್ಲ. ಆದ್ದರಿಂದ ಇಲ್ಲಿ 1991ರ ಜನಗಣತಿ ವಿವರಗಳನ್ನು ಬಳಸಿಕೊಳ್ಳಲಾಗಿದೆ. ಕರ್ನಾಟಕದಲ್ಲಿ 1991ರಲ್ಲಿದ್ದ ಒಟ್ಟು ದುಡಿಮೆಗಾರರ ಸಂಖ್ಯೆ 172.92 ಲಕ್ಷ. ಇವರಲ್ಲಿ ಮಹಿಳೆಯರ ಸಂಖ್ಯೆ 50.07ಲಕ್ಷ. ಮಹಿಳೆಯರ ಒಟ್ಟು ದುಡಿಮೆಯ ಸಹಭಾಗಿತ್ವ ಪ್ರಮಾಣ ಶೇ 22.73. (ಕೋಷ್ಟಕ - 1)ರಲ್ಲಿ ವಿವಿಧ ವಲಯಗಳಲ್ಲಿನ ಮಹಿಳಾ ದುಡಿಮೆಗಾರರ ವಿವರವನ್ನು ನೀಡಲಾಗಿದೆ.

ಕರ್ನಾಟಕದಲ್ಲಿ ಒಟ್ಟು ದುಡಿಮೆಗಾರ ವರ್ಗದಲ್ಲಿ ಮಹಿಳೆಯರ ಪ್ರಮಾಣ ಶೇ 28.95. ಇದು ಅತ್ಯಂತ ಸೀಮಿತವಾದ ದುಡಿಮೆಯ ವ್ಯಾಖ್ಯೆಯ ಆಧಾರದಿಂದ ಗಣನೆ ಮಾಡಿದಾಗ ಕಂಡುಬಂದ ಪ್ರಮಾಣ. ದುಡಿಮೆಯ ವ್ಯಾಖ್ಯೆಯನ್ನು ವಿಸ್ತೃತಗೊಳಿಸಿದಾಗ ಸದರಿ ಪ್ರಮಾಣವು ಅಧಿಕಗೊಳ್ಳುತ್ತದೆ.

ಕೋಷ್ಟಕದಲ್ಲಿ ಕೊಟ್ಟಿರುವ ಮೊದಲ ನಾಲ್ಕು ವಲಯಗಳನ್ನು ಕೃಷಿ ಆಧಾರಿತ ವಲಯವೆಂದು ವರ್ಗೀಕರಿಸಬಹುದು. ಉಳಿದವುಗಳನ್ನು ಕೃಷಿಯೇತರವೆಂದು ವರ್ಗೀಕರಿಸಬಹುದು. ಮೊದಲ ಗುಂಪಿನ ವಲಯಗಳು ಸರ್ವೇ ಸಾಮಾನ್ಯವಾಗಿ ಅಸಂಘಟಿತವಾಗಿರುತ್ತವೆ. ಆದರೆ ಉಳಿದ ಎರಡನೆಯ ಗುಂಪಿನ ವಲಯಗಳು ತುಂಬಾ ವಿಸ್ತೃತವಾದ ಅರ್ಥದಲ್ಲಿ ಸಂಘಟನಾ ವಲಯವೆಂದು ಪರಿಗಣಿಸಬಹುದು. ಈ ಬಗೆಯ ವರ್ಗೀಕರಣವು ನಮಗೆ ದುಡಿಮೆಗಾರ ವರ್ಗದ ಲಿಂಗ ಸಂಬಂಧಿ ಸ್ವರೂಪದ ನಿಜಚಿತ್ರವನ್ನು ನೀಡುತ್ತದೆ. ಕೋಷ್ಟಕ - 1ರ ಪ್ರಕಾರ ದುಡಿಮೆಗಾರ ಮಹಿಳೆಯರಲ್ಲಿ ಶೇ. 78.87ರಷ್ಟು ಕೃಷಿ ಆಧಾರಿತ ಅಸಂಘಟಿತ ವಲಯದಲ್ಲಿ ಸಂದಣಿಸಿದ್ದರೆ ಪುರುಷರಲ್ಲಿ ಕೇವಲ ಶೇ. 62.67ರಷ್ಟು ದುಡಿಮೆಗಾರರು ಇಂತಹ ಅಸಂಘಟಿತ ಕೃಷಿ ಆಧಾರಿತ ವಲಯದಲ್ಲಿ ಸಂದಣಿಸಿದ್ದಾರೆ. ಸಂಘಟಿತ ಹಾಗೂ ಆಧುನಿಕ ವಲಯದಲ್ಲಿ ದುಡಿಯುತ್ತಿರುವ ಮಹಿಳೆಯರ ಪ್ರಮಾಣವು ಕೇವಲ ಶೇ. 21.13ರಷ್ಟಿದ್ದರೆ ಪುರುಷರಿಗೆ ಸಂಬಂಧಿಸಿದಂತೆ ಇದು ಶೇ. 37.33ರಷ್ಟಿದೆ. ಒಟ್ಟು ಮಹಿಳಾ ದುಡಿಮೆಗಾರರಲ್ಲಿ ಭೂರಹಿತ ಕೂಲಿಕಾರ ಮಹಿಳೆಯರ ಪ್ರಮಾಣ ಶೇ. 49.68ರಷ್ಟಿದೆ. ದುಡಿಮೆಗಾರ ಮಹಿಳೆಯರಲ್ಲಿ ಸರಿಸುಮಾರು ಅರ್ಧದಷ್ಟು ಕೃಷಿ ಕೂಲಿಕಾರರಾಗಿ ತಮ್ಮ ಬದುಕನ್ನು ಕಟ್ಟಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಕೃಷಿ ಸಂಬಂಧಿ ದುಡಿಮೆಯಲ್ಲಿ ಕೂಲಿಯು ಕೃಷಿಯೇತರವಲಯಗಳಲ್ಲಿನ ದುಡಿಮೆಯ ಕೂಲಿಗಿಂತ ಕಡಿಮೆ. ಮಹಿಳೆಯರು ಎಂಬ ಕಾರಣಕ್ಕೆ ಮಹಿಳಾ ದುಡಿಮೆಗಾರರು ಕೂಲಿಯಲ್ಲಿ ತಾರತಮ್ಯ

ಅನುಭವಿಸುತ್ತಿದ್ದಾರೆ. ಇದರ ಜೊತೆಗೆ ಅವರಲ್ಲಿ ಮುಕ್ಕಾಲು ಭಾಗ ಕೃಷಿಯಲ್ಲಿರುವುದರಿಂದ ಅವರ ಕೂಲಿ-ದುಡಿಮೆ ತುಂಬಾ ನಿಕೃಷ್ಟವಾದುದಾಗಿದೆ.

## ಭಾಗ - 2

### ಜಾಗತೀಕರಣದ ಪರಿಣಾಮಗಳು

ಮಹಿಳೆಯರ ದುಡಿಮೆಗೆ ಸಂಬಂಧಿಸಿದಂತೆ ಜಾಗತೀಕರಣ ಹಾಗೂ ಅದರ ಸಂತಾನಗಳು ಅನೇಕ ರೀತಿಯ ಪರಿಣಾಮ ಬೀರಿವೆ, ಬದಲಾವಣೆ ತಂದಿವೆ ಮತ್ತು ಸಮಸ್ಯೆಗಳನ್ನು ಹುಟ್ಟುಹಾಕಿವೆ. ಈಗಾಗಲೆ ಅಧ್ಯಯನಗಳು ಗುರುತಿಸಿರುವಂತೆ ಜಾಗತೀಕರಣ - ಖಾಸಗೀಕರಣ - ಮಾರ್ಕೆಟ್ಟೀಕರಣಗಳಿಂದಾಗಿ ''ಶ್ರಮವು ಲಿಂಗೀಕರಣ''ಕ್ಕೆ ಒಳಗಾಗಿದೆ (ಫೆಮಿನೈಜೇಶನ್ ಆಫ್ ಲೇಬರ್). ಶ್ರಮ ಶಕ್ತಿಯಲ್ಲಿ ಹಾಗೂ ದುಡಿಮೆಗಾರರ ವರ್ಗದಲ್ಲಿ ಮಹಿಳೆಯರ ಪ್ರಮಾಣವು ಅಧಿಕವಾಗುತ್ತಿರುವ ಪ್ರಕ್ರಿಯೆಯನ್ನು 'ಶ್ರಮದ ಲಿಂಗೀಕರಣ'ವೆಂದು ಕರೆಯಲಾಗಿದೆ. ಇಂದು ನಮ್ಮ ಸಮಾಜದಲ್ಲಿ ಶ್ರಮ ಶಕ್ತಿಯಲ್ಲಿ ಮಹಿಳೆಯರ ಪ್ರಮಾಣ ಬೆಳೆಯುತ್ತಿದೆ. ಸಣ್ಣ-ಪುಟ್ಟ ನಗರ-ಪಟ್ಟಣಗಳಲ್ಲೂ ದುಡಿಯಲು ತೊಡಗಿದ್ದಾರೆ. ಕರ್ನಾಟಕದ ತಾಲ್ಲೂಕು (175)ಗಳಲ್ಲಿ ಕಂಡು ಬರುವ ಎಸ್‌ಟಿಡಿ ಬೂತ್‌ಗಳಲ್ಲಿ, ಜೆರಾಕ್ಸ್ ಕೇಂದ್ರಗಳಲ್ಲಿ, ಕಂಪ್ಯೂಟರ್ ಬೂತ್‌ಗಳಲ್ಲಿ, ಕೊರಿಯರ್ ಕೌಂಟರ್‌ಗಳಲ್ಲಿ, ಹೆಣ್ಣುಮಕ್ಕಳು ದುಡಿಯುತ್ತಿರುವುದನ್ನು ಕಾಣಬಹುದು. ಈ ಎಸ್‌ಟಿಡಿ ಸೆಂಟರ್‌ಗಳಲ್ಲಿ, ಜೆರಾಕ್ಸ್ ಕೇಂದ್ರಗಳಲ್ಲಿ, ಕಂಪ್ಯೂಟರ್ ಬೂತ್‌ಗಳಲ್ಲಿ, ಅವುಗಳ ಮಾಲೀಕರು ಮಹಿಳೆಯರನ್ನು ನೇಮಿಸಿಕೊಳ್ಳಲು ಬಯಸುತ್ತಾರೆ. ಇದಕ್ಕೆ ಬಹುಮುಖ್ಯ ಕಾರಣವೆಂದರೆ ಅವರ ಕಾರ್ಯಕ್ಷಮತೆ, ಪ್ರಾಮಾಣಿಕತೆ ಹಾಗೂ ಸುಮ್ಮನೆ ದುಡಿಯುವ ಗುಣ. ಇವರಿಗೆ ಕೂಲಿ ಕಡಿಮೆ ಕೊಡಬಹುದು. ಹೆಚ್ಚು ಗಂಟೆಗಳ ಕಾಲ ದುಡಿಸಿಕೊಳ್ಳಬಹುದು. ಇವರನ್ನು ಹೈರ್ ಮಾಡಿಕೊಳ್ಳುವುದು ಸುಲಭ ಹಾಗೂ ಫೈರ್ ಮಾಡುವುದು ಸುಲಭ.

ಈ ಬಗೆಯ ದುಡಿಮೆಗೆ ಪ್ರವೇಶಿಸುತ್ತಿರುವ ಹುಡುಗಿಯರೆಲ್ಲ ಸಾಮಾನ್ಯವಾಗಿ 15 ರಿಂದ 25 ವಯೋಮಾನದವರಾಗಿರುತ್ತಾರೆ, ಅವಿವಾಹಿತರಾಗಿರುತ್ತಾರೆ. ಎಸ್.ಎಸ್.ಎಲ್.ಸಿ. ಅಥವಾ ಪಿಯುಸಿ ಓದಿರುತ್ತಾರೆ. ಇವರೆಲ್ಲ ಸಾಮಾನ್ಯವಾಗಿ ಕೆಳಮಧ್ಯಮ-ಕೆಳವರ್ಗದ ಕುಟುಂಬಗಳಿಗೆ ಸೇರಿದವರಾಗಿರುತ್ತಾರೆ. ಇವರಿಗೆ ತಮ್ಮ ಶಿಕ್ಷಣ ಮುಂದುವರಿಸುವುದು ಸಾಧ್ಯವಿರುವುದಿಲ್ಲ. ಇದಕ್ಕೆ ಹಣಕಾಸಿನ ಮುಗ್ಗಟ್ಟು ಒಂದು ಕಾರಣವಾದರೆ ಅವರ ಕೆಳಮಟ್ಟದ ಬುದ್ಧಿ ಮತ್ತೆಯು ಒಂದು ಕಾರಣವಾಗಿರುವ ಸಾಧ್ಯತೆ ಇರುತ್ತದೆ. ಸಣ್ಣ-ಪುಟ್ಟ ಸರ್ಕಾರಿ ಶಾಲೆ, ಪ್ರೌಢಶಾಲೆಗಳಲ್ಲಿ ಓದಿರುತ್ತಾರೆ. ಎಸ್.ಎಸ್.ಎಲ್.ಸಿ.-ಪಿಯುಸಿ ಪಾಸು ಮಾಡುವುದೇ ಒಂದು ದೊಡ್ಡ ಸಾಹಸವಾಗಿರುತ್ತದೆ. ಇವರೆಲ್ಲ ಸಾಮಾನ್ಯವಾಗಿ ಕಲೆ-ವಾಣಿಜ್ಯ ವಿಷಯಗಳಲ್ಲಿ ಪಿಯುಸಿ ಪಾಸೋ-ಫೇಲೋ ಆದವರಾಗಿರುತ್ತಾರೆ.

ಈ ಬಗೆಯ ಹುಡುಗಿಯರ ಕುಟುಂಬಗಳಲ್ಲಿ ಊಟ-ಬಟ್ಟೆಗೆ ಸಾಕಾಗುವಷ್ಟು ವರಮಾನವಿರುತ್ತದೆ. ತಂದೆ-ತಾಯಿ ಕಷ್ಟಪಟ್ಟು ದುಡಿಯುತ್ತಿರುತ್ತಾರೆ. ಅಣ್ಣ-ತಮ್ಮಂದಿರು ಉಡಾಳರಾಗಿ ಬೀದಿ ಬೀದಿ ತಿರುಗುತ್ತಿರುತ್ತಾರೆ. ಸರೀಕರ ಮುಂದೆ ತಮ್ಮ ಕುಟುಂಬವನ್ನು ಒಳ್ಳೆಯ ಸ್ಥಿತಿಗೆ ಬರುವಂತೆ ಮಾಡುವ ಉಮೇದಿನಿಂದ ಹುಡುಗಿಯರು ದುಡಿಯುತ್ತಿರುತ್ತಾರೆ. ಜೆರಾಕ್ಸ್, ಎಸ್‌ಟಿಡಿ, ಕೊರಿಯರ್, ಕಂಪ್ಯೂಟರ್ ಮುಂತಾದ ಹೊಸ ಬಗೆಯ ದುಡಿಮೆಯ ಕೇಂದ್ರಗಳಿಗೆ ಹೆಣ್ಣುಮಕ್ಕಳನ್ನು ದುಡಿಮೆಗೆ ಕಳುಹಿಸಲು ಕೆಳಮಧ್ಯಮ ಹಾಗೂ ಕೆಳವರ್ಗಗಳ ಕುಟುಂಬಗಳು ಹಿಂಜರಿಯುವ ಅಗತ್ಯವಿರುವುದಿಲ್ಲ. ಏಕೆಂದರೆ ಇಲ್ಲಿ ಬಿಸಿಲಿನಲ್ಲಿ ದುಡಿಯುವ ಅಗತ್ಯವಿಲ್ಲ. ಒಂದು ಬಗೆಯ ಮರ್ಯಾದೆಯುತವಾದ ದುಡಿಮೆ ಇದಾಗಿದೆ. ಇಲ್ಲಿ ಹುಡುಗಿಯರಿಗೆ ಕೈತುಂಬಾ ಸಂಬಳವಿಲ್ಲದಿದ್ದರೂ ದಿನವಹಿ 30 ರಿಂದ 40 ರೂಪಾಯಿ ಸಂಬಳ / ಕೂಲಿಯಿರುತ್ತದೆ. ಪ್ರತಿದಿನ 10ರಿಂದ 12 ಗಂಟೆ ದುಡಿಮೆ.

ಕೂಲಿಕೆಲಸಕ್ಕಿಂತ ಉತ್ತಮ. ಈ ಹುಡುಗಿಯರ ಕುಟುಂಬಗಳಿಗೆ ಇವರ ದುಡಿಮೆಯೇ ಮೂಲ ವರಮಾನವೇನಲ್ಲ. ಆದ್ದರಿಂದ ತಂದೆ-ತಾಯಿಯರು ಇಷ್ಟೇ ಕೂಲಿ ಎಂದು ಬಯಸುವುದಿಲ್ಲ. ಮನೆಯಲ್ಲಿ ಸುಮ್ಮನೆ ಕೂರುವುದಕ್ಕಿಂತ ಇದು ಲೇಸು ಎಂದು ದುಡಿಮೆಗೆ ಹೋಗುವವರಿದ್ದಾರೆ. ಮನೆಯ ಖರ್ಚು ವೆಚ್ಚಗಳಿಗೆ ಇವರ ಗಳಿಕೆಯೂ ಸೇರುತ್ತದೆ. ಹೆಣ್ಣು ಮಕ್ಕಳದ್ದೇ ಎನ್ನಬಹುದಾದ ಕೆಲವು ಖರ್ಚುಗಳನ್ನು ಇದರಲ್ಲಿ ನಿಭಾಯಿಸಬಹುದು.

### ಇದು ಜಾಗತೀಕರಣದ ಕೊಡುಗೆಯೆ?

ಈ ಬಗೆಯ ಬದಲಾವಣೆ - ಅವಕಾಶಗಳ ವಿಸ್ತರಣೆ ಜಾಗತೀಕರಣದಿಂದ ಉಂಟಾಗಿದೆಯೆ ಎಂದು ಕೇಳಿದರೆ ಉತ್ತರ ಹೇಳುವುದು ಕಷ್ಟ. ಇದರಿಂದ ಮಹಿಳೆಯರ ಕಷ್ಟ - ಕೋಟಲೆಗಳು, ಶೋಷಣೆ ಉಲ್ಬಣಗೊಂಡಿದೆಯೆ ಎಂದರೆ ಏನು ಹೇಳುವುದು? ಜಾಗತೀಕರಣವಿಲ್ಲದಿದ್ದರೆ ಇಂತಹ ಬೆಳವಣಿಗೆಗಳಾಗುತ್ತಿರಲಿಲ್ಲವೆ? ಯಾರಿಗೆ ಗೊತ್ತು? ಇವು ಜಾಗತೀಕರಣದಿಂದಲೇ ಉಂಟಾಗಿವೆಯೆಂದು ಭಾವಿಸಿದರೆ, ಇದರಿಂದ ಉಂಟಾಗಿರುವ ತೊಂದರೆಗಳೇನು? ಇದರ ಅರ್ಥ, ಇಲ್ಲಿ ತೊಂದರೆಗಳೇ ಇಲ್ಲ ಎಂಬುದಲ್ಲ. ಆದರೆ ಇಲ್ಲೇನಾದರೂ ತೊಂದರೆಗಳಿದ್ದರೆ ಅವು ಜಾಗತೀಕರಣದಿಂದಲೇ ಉಂಟಾಗಿವೆಯೆಂದು ಹೇಗೆ ಹೇಳುವುದು? ಜಾಗತೀಕರಣವಿಲ್ಲದಿದ್ದರೆ ಇಂತಹ ತೊಂದರೆಗಳು ಇರುತ್ತಿರಲಿಲ್ಲವೆಂದು ಹೇಳುವುದು ಹೇಗೆ?

## ಬಡತನದ ಲಿಂಗೀಕರಣ

ಮಹಿಳೆಯರ ದುಡಿಮೆ ಕುರಿತಂತೆ 'ಬಡತನದ ಲಿಂಗೀಕರಣ'ವೆಂಬ (ಫೆಮಿನೈಜೇಶನ್ ಆಫ್ ಪಾವರ್ಟಿ) ಪ್ರಕ್ರಿಯೆ ಬಗ್ಗೆಯೂ ಇತ್ತೀಚೆಗೆ ಚರ್ಚೆ ಪ್ರಾರಂಭವಾಗಿದೆ. ಇದು ಜಾಗತೀಕರಣದಿಂದಲೇ ಉಂಟಾಗಿದೆ ಎಂಬುದನ್ನು ಒಪ್ಪಿಕೊಂಡರೂ ಒಂದು ಶಂಕೆ ಮನಸ್ಸಿನಲ್ಲಿ ಉಳಿದುಕೊಂಡು ಬಿಡುತ್ತದೆ. ಜಾಗತೀಕರಣವಿಲ್ಲದಿದ್ದರೂ 'ಬಡತನದ ಲಿಂಗೀಕರಣ'ವು ನಮ್ಮ ಸಮಾಜದಲ್ಲಿ ಉಂಟಾಗಬಹುದಾಗಿದ್ದ ಒಂದು ವಿಕಾರವಲ್ಲವೆ? ಬದುಕು ತುಂಬಾ ದುರ್ಭರವಾದಾಗ ಬರ್ಬರವಾದಾಗ ಅದನ್ನು ನಿಭಾಯಿಸುವ ಜವಾಬುದಾರಿ ಮಹಿಳೆಯರ ಮೇಲೆ ಬೀಳುತ್ತದೆ. ಜಾಗತೀಕರಣದ ಬಡವರ ಬದುಕು ಮೂರಾಬಟ್ಟೆಯಾಗುತ್ತಿದೆ. ಜಾಗತೀಕರಣವಾಗದಿದ್ದರೆ ಹೀಗಾಗುತ್ತಿರಲಿಲ್ಲವೆಂಬುದಕ್ಕೆ ಆಧಾರವೇನು? ಆದ್ದರಿಂದ ದುಡಿಮೆ ಬಗ್ಗೆ, ಮಹಿಳೆಯರ ದುಡಿಮೆ ಬಗ್ಗೆ, ದುಡಿಮೆಗಾರ ಮಹಿಳೆಯರ ಬಗ್ಗೆ ಯೋಚಿಸುವಾಗ ಅಗತ್ಯವಾಗಿ ಜಾಗತೀಕರಣವನ್ನು ಮೀರಿ ಚಿಂತಿಸಬೇಕಾಗುತ್ತದೆ. ಇವೆಲ್ಲಕ್ಕೂ ಜಾಗತೀಕರಣವೇ ಮಾನದಂಡವಾಗಬೇಕಾಗಿಲ್ಲ.

ಪ್ರಸಿದ್ಧ ಸಮಾಜಶಾಸ್ತ್ರಜ್ಞ ಎಂ. ಎನ್. ಶ್ರೀನಿವಾಸ್ ರವರು ನಮ್ಮ ಸಮಾಜದ ಮಹಿಳೆಯರ ದುಡಿಮೆಯನ್ನು ಕುರಿತಂತೆ, ಮುಖ್ಯವಾಗಿ ಗ್ರಾಮೀಣ ದುಡಿಮೆಗಾರರ ಮಹಿಳೆಯರನ್ನು ಕುರಿತಂತೆ, ಒಂದು ಪ್ರಸಿದ್ಧ ಪ್ರಮೇಯ ಮಂಡಿಸಿದ್ದಾರೆ. ಅದೇನೆಂದರೆ ಮನೆಯ ಹೊರಗೆ - ಸ್ವಂತ ಜಮೀನಿನಲ್ಲಿ ಅಥವಾ ಕೂಲಿಗಾಗಿ ಮಹಿಳೆಯರು ದುಡಿಯುವುದಕ್ಕೂ ಮತ್ತು ಅಂತಹ ಕುಟುಂಬಗಳ ಆರ್ಥಿಕ ಸ್ಥಿತಿಗತಿ ಹಾಗೂ ಸಾಮಾಜಿಕ ಸ್ಥಾನಮಾನಗಳ ನಡುವೆ ಸಂಬಂಧವಿದೆಯೆಂಬುದೇ ಆ ಪ್ರಮೇಯ. ಕುಟುಂಬದ ಆರ್ಥಿಕ ಸ್ಥಿತಿಗತಿ ಉತ್ತಮಗೊಂಡಾಗ ಸದರಿ ಕುಟುಂಬದ ಮಹಿಳೆಯರು ಮನೆಯ ಹೊರಗೆ ದುಡಿಮೆಗೆ ಹೋಗದೆ ಮನೆವಾರ್ತೆಗಳಿಗೆ ತಮ್ಮ ದುಡಿಮೆಯನ್ನು ಸೀಮಿತಗೊಳಿಸಿಕೊಂಡುಬಿಡುತ್ತಾರೆ ಎಂಬುದು ಅವರ ಪ್ರಮೇಯದ ಅರ್ಥ. ಇದನ್ನು ಅವರು 'ಇಪ್ರೂವ್‌ಮೆಂಟ್' ಎಂದು ಕರೆಯುತ್ತಾರೆ. ಈ ಇಪ್ರೂವ್‌ಮೆಂಟ್ ಒಂದು ಕುಟುಂಬದ ಸಾಮಾಜಿಕ ಸ್ಥಾನಮಾನವು ಉತ್ತಮಗೊಂಡಿದ್ದರ ಸೂಚಿಯಾಗಿದೆ. ಬಡತನದ ಲಿಂಗೀಕರಣವು ಶ್ರೀನಿವಾಸ್ ಹೇಳುವ ಇಪ್ರೂವ್‌ಮೆಂಟ್ ಸಾಧ್ಯವಾಗದಿರುವ ಒಂದು ಸಂಗತಿಯನ್ನು ಸೂಚಿಸುತ್ತಾರೆ.

ಬಡತನವು ತೀವ್ರವಾದಾಗ - ಅಸಹನೀಯವಾದಾಗ - ಭರಿಸಲಸದಳವಾದಾಗ ಕುಟುಂಬದ ಮಹಿಳೆಯರು ಎಲ್ಲ ಬಗೆಯ ಕಟ್ಟುಪಾಡುಗಳು - ರೂಢಿಗಳನ್ನು ಪಕ್ಕಕ್ಕೆ ತಳ್ಳಿ ಮನೆಯ ಹೊರಗೆ ದುಡಿಯಲು ಹೋಗಬೇಕಾಗುತ್ತದೆ. 'ಮನೆಯ ಹೊರಗೆ ದುಡಿಯುವುದು' ಎಂಬುದನ್ನು ಎರಡು ಬಗೆಗಳಲ್ಲಿ ಪರಿಭಾವಿಸಿಕೊಳ್ಳಬಹುದು.

1. ಮನೆಯ ಹೊರಗೆ ದುಡಿಯುವುದು ಆಯ್ಕೆಯ ಸಂಗತಿಯಾಗುವುದು.
2. ಮನೆಯ ಹೊರಗೆ ದುಡಿಯುವುದು ಅನಿವಾರ್ಯವಾಗುವುದು.

ನಮ್ಮ ಸಮಾಜದ ಸಂದರ್ಭದಲ್ಲಿ ಉನ್ನತ ವರ್ಗದ ಮಹಿಳೆಯರಿಗೆ ಮನೆಯ ಹೊರಗೆ ದುಡಿಯುವುದು ಆಯ್ಕೆಯ ಸಂಗತಿಯಾಗಿದ್ದರೆ ಬಡತನದ ಲಿಂಗೀಕರಣಕ್ಕೆ ಒಳಗಾಗಿರುವ ಕುಟುಂಬಗಳಲ್ಲಿ ಅದು ಅನಿವಾರ್ಯವಾಗಿದೆ. ಉನ್ನತ ವರ್ಗದ ಮಹಿಳೆಯರು, ಶಿಕ್ಷಣ-ತರಬೇತಿ ಪಡೆದಿರುವ ಕಾರಣ ಸಂಘಟನ ವಲಯದಲ್ಲಿ ಉದ್ಯೋಗವನ್ನು ಆಯ್ಕೆ ಮಾಡಿಕೊಳ್ಳಬಹುದು. ಆದರೆ ಬಡಕುಟುಂಬಗಳ ಮಹಿಳೆಯರಿಗೆ ಇಂತಹ ಅವಕಾಶಗಳಿರುವುದಿಲ್ಲ. ಅವರು ಆಯ್ಕೆಯ ಸ್ವಾತಂತ್ರ್ಯದಿಂದ ವಂಚಿತರಾಗಿದ್ದಾರೆ. ಅಂದಮೇಲೆ ಬಡತನದ ಲಿಂಗೀಕರಣವೆನ್ನುವುದು ಶ್ರೀನಿವಾಸ್‌ರವರ ಇಪ್ರೂವ್‌ಮೆಂಟ್‌ಗೆ ವಿರುದ್ಧವಾದುದು. ಉನ್ನತ ವರ್ಗದ ಮಹಿಳೆಯರಿಗೆ ಮನೆಯ ಹೊರಗೆ ದುಡಿಯುವುದು ಪ್ರತಿಷ್ಠೆಯ ಸಂಗತಿಯಾಗಿಬಿಡುತ್ತದೆ. ಕೆಳವರ್ಗದ ಮಹಿಳೆಯರಿಗೆ ಮನೆಯ ಹೊರಗೆ ದುಡಿಯುವುದು ಹೊಟ್ಟೆ ಬಟ್ಟೆಯ ಸಂಗತಿಯಾಗಿದೆ. ಮನೆಯ ಹೊರಗಿನ ದುಡಿಮೆಯು ಮಹಿಳೆಯರಿಗೆ 'ಆಯ್ಕೆ'ಯಾದಾಗ ಅದನ್ನು 'ಅಭಿವೃದ್ಧಿ'ಯೆಂದೂ, ಅದು 'ಅನಿವಾರ್ಯ'ವಾದಾಗ ಅದನ್ನು 'ಬಡತನ'ವೆಂದೂ ಗುರುತಿಸಬಹುದಾಗಿದೆ. ನೊಬೆಲ್ ಪ್ರಶಸ್ತಿ ವಿಜೇತ ಅಮರ್ತ್ಯ ಸೇನ್‌ರವರು 'ಸ್ವಾತಂತ್ರ್ಯವೇ ಅಭಿವೃದ್ಧಿ' ಎಂಬ ಸಂಕಥನವನ್ನು ಕಟ್ಟುತ್ತಿದ್ದಾರೆ. ಮನೆಯ ಹೊರಗೆ ದುಡಿಯುವ ಆಯ್ಕೆಯಾದಾಗ ಅದು ಸ್ವಾತಂತ್ರ್ಯವನ್ನು ಪ್ರತಿನಿಧಿಸುತ್ತದೆ. ಅದೇ ಅಭಿವೃದ್ಧಿ. ಮನೆಯ ಹೊರಗೆ ದುಡಿಯುವುದು ಅನಿವಾರ್ಯವಾದಾಗ ಅಲ್ಲಿ ಸ್ವಾತಂತ್ರ್ಯವಿಲ್ಲ. ಅದು ಬಡತನದ ಸೂಚಿಯಾಗುತ್ತದೆ.

## ಮಹಿಳೆಯರ ಪಡಿಪಾಟಲು

ಹಳ್ಳಿ-ಕೊಂಪೆ-ತಾಂಡ-ಪಾಳ್ಯಗಳಲ್ಲಿ, ಸಣ್ಣಪುಟ್ಟ ನಗರ-ಪಟ್ಟಣಗಳಲ್ಲಿ, ಬಡ ಕುಟುಂಬಗಳ ಮಹಿಳೆಯರು ಊಟ - ಬಟ್ಟೆಗಾಗಿ ಪಡುತ್ತಿರುವ ಪಡಿಪಾಟಲು ದಿನೇ ದಿನೇ ಉಲ್ಬಣಗೊಳ್ಳುತ್ತಿದೆ. ದುಡಿಯಬೇಕು ಎಂದರೆ ಕೈತುಂಬ ಕೆಲಸವಿಲ್ಲ, ಹೊಟ್ಟೆತುಂಬ ಊಟವಿಲ್ಲ. ಕೆಲಸ ಹುಡುಕಿಕೊಂಡು ದೂರದೂರದ ಸ್ಥಳಗಳಿಗೆ ಹೋಗಲು ಮಹಿಳೆಯರಿಗೆ ಸಾಧ್ಯವಾಗುವುದಿಲ್ಲ. ಅವರ ಸಂಚಲನೆ-ಸಂಚಾರಕ್ಕೆ ಸಂಬಂಧಿಸಿದಂತೆ ಅನೇಕ ನಿರ್ಬಂಧಗಳಿವೆ. ಸಣ್ಣಪುಟ್ಟ ವ್ಯಾಪಾರ ಮಾಡಿಕೊಂಡು ಬದುಕು ದೂಡುತ್ತಿರುವ ಸಾವಿರಾರು ಮಹಿಳೆಯರನ್ನು ಇಂದು ಸಣ್ಣ-ಪುಟ್ಟ ನಗರಗಳಲ್ಲಿ ನೋಡಬಹುದಾಗಿದೆ. ತರಕಾರಿ, ಬಳೆ, ಕುಂಕುಮ, ಪಾತ್ರೆ, ಒಡವೆ, ಹಣ್ಣು, ಬುಟ್ಟಿ, ಬಿಂದಿಗೆ, ಟೇಪು-ಪೌಡರ್ - ಹೀಗೆ

ನೂರಾರು ಬಗೆಯ ವಸ್ತುಗಳನ್ನು ವ್ಯಾಪಾರ ಮಾಡಿ ಬದುಕುತ್ತಿರುವ ನೂರಾರು ಮಹಿಳೆಯರನ್ನು ನಾವು ದಿನ ನಿತ್ಯವೂ ನೋಡಬಹುದು. ರಸ್ತೆ ಬದಿಯಲ್ಲಿ ಚಹಾ ಗೂಡು ಹಾಕಿಕೊಳ್ಳುತ್ತಾರೆ. ಯಾರಿಗೋ ಮಾಮೂಲಿ ಕೊಡುತ್ತಾರೆ. ಮಳೆಗೆ, ಬಿಸಿಲಿಗೆ, ಗಾಳಿಗೆ ಮರೆ ಕಟ್ಟಿಕೊಳ್ಳುತ್ತಾರೆ. ಅಲ್ಲೇ ಬದುಕು ಪ್ರಾರಂಭಿಸುತ್ತಾರೆ. ಇನ್ನಾರೋ ಸಂತೆ-ಸಂತೆಗೆ ಹೋಗಿ ಪಾತ್ರೆ, ಹೆಂಚು, ಸೌಟು - ಕುರುಗೋಲು, ಇಳಿಗೆ ಮಣೆ ಮಾರಾಟ ಮಾಡುವ ಕಾಯಕ ನಡೆಸುತ್ತಾರೆ. ಇವರೆಲ್ಲರಿಗೂ ಕೈ-ಕಾಲಿಗೆ ಸುತ್ತಿಕೊಳ್ಳುವ ಮಕ್ಕಳಿರುತ್ತಾರೆ. ಗಂಡ-ಗಂಡು ಮಕ್ಕಳ ಸಹಾಯ ಬಹಳ ಕಡಿಮೆ. ಹೀಗೆ ಹೋರಾಟ ಮಾಡಿಕೊಂಡು ಗಂಡನ ಜೊತೆ, ಗಂಡು ಮಕ್ಕಳ ಜೊತೆ, ಪೊಲೀಸರ ಜೊತೆ, ಅಧಿಕಾರಿಗಳ ಜೊತೆ, ಪುಂಡರು-ಪೋಕರಿಗಳ ಜೊತೆ ಕಾದಾಡುತ್ತಾ - ಅರಚಾಡುತ್ತಾ ಏಗುತ್ತಿರುವ ಸಾವಿರಾರು - ಲಕ್ಷಾಂತರ ಮಹಿಳೆಯರು ದುಡಿಮೆಗಾರರಲ್ಲದೆ ಮತ್ತಾರು ದುಡಿಮೆಗಾರರು? ಈ ರೀತಿ ಬದುಕು - ಬವಣೆ ಜಾಗತೀಕರಣದಿಂದ ಉಂಟಾಗಿದೆಯೇ ಎಂದರೆ ಎಲ್ಲಿದೆ ಉತ್ತರ?

### ಜಾಗತೀಕರಣ - ಸಾರ್ವಜನಿಕ ವಲಯ

ಜಾಗತೀಕರಣದ ಬಹುಮುಖ್ಯ ವಿಷಸಂತಾನವೆಂದರೆ ಖಾಸಗೀಕರಣ. ಖಾಸಗೀಕರಣವು ಸಾರ್ವಜನಿಕ ವಲಯಕ್ಕೆ, ಸದರಿ ವಲಯದ ಸಂತೃಪ್ತ ಕಾರ್ಮಿಕರ ವರ್ಗಕ್ಕೆ ವಿಷಪ್ರಾಯವಾಗಿ ಪರಿಣಮಿಸಿದೆ. ಖಾಸಗೀ ವಲಯ ಹಾಗೂ ಸಾರ್ವಜನಿಕ ವಲಯಗಳ ನಡುವೆ ದುಡಿಮೆಗಾರ ಬಡಮಹಿಳೆಯರಿಗೆ ಆಯ್ಕೆಗೆ ಅವಕಾಶವಿದೆಯೆ? ಇವೆರಡರಲ್ಲಿ ಯಾವುದರಿಂದ ಬಡಮಹಿಳೆಯರ ಬದುಕು ಉತ್ತಮವಾಗಬಲ್ಲದು? ಸಾರ್ವಜನಿಕ ವಲಯದ ಉದ್ದಿಮೆ, ಸಂಸ್ಥೆ-ಸೇವೆಗಳಿಂದ ನಮ್ಮ ಸಮಾಜದ ವಂಚಿತ-ಬಡ-ದುರ್ಬಲ ಮಹಿಳೆಯರಿಗೆ ಸಹಾಯ ದೊರೆತಿದೆಯೆ? ರಾಷ್ಟ್ರೀಕೃತ ಬ್ಯಾಂಕುಗಳಿಂದ ಎಷ್ಟು ಜನ ಮಹಿಳೆಯರಿಗೆ. ಬಡಕೂಲಿಕಾರ ಮಹಿಳೆಯರಿಗೆ, ಯಾವ ಬಗೆಯ ನೆರವು ದೊರೆತಿದೆ? ಅವೇನು ನಮ್ಮ ದೇಶದ ಕೋಟ್ಯಾಂತರ ದುಡಿಮೆಗಾರ ಹೆಣ್ಣುಮಕ್ಕಳಿಗೆ ಸಾಲ ನೀಡಿವೆಯೆ? ಸಾರ್ವಜನಿಕ ಆಹಾರವಿತರಣೆ - ಯೋಗ್ಯಬೆಲೆ ಅಂಗಡಿಗಳಿಂದ ಬಡ ಮಹಿಳೆಯರು ಮುಖ್ಯಸ್ಥರಾಗಿರುವ ಕೂಲಿಕಾರ ಕುಟುಂಬಗಳಿಗೆ ಅನುಕೂಲ ದೊರಕಿದೆಯೆ? ಸಮಾಜ ಕಲ್ಯಾಣ, ಮಕ್ಕಳ ಕಲ್ಯಾಣ, ಮಹಿಳಾ ಕಲ್ಯಾಣ - ಮುಂತಾದ ಸಂಗತಿಗಳಲ್ಲಿ ಮುಳುಗಿ ಹೋಗಿರುವ ಇಲಾಖೆಗಳಿಂದ ಯಾರ ಕಲ್ಯಾಣವಾಗಿದೆ? ಅಭಿವೃದ್ಧಿ ಎನ್ನುವುದೇನು ದತ್ತಿಯೇ - ಉಂಬಳಿಯೆ? ಇಂತಹ ಪ್ರಶ್ನೆಗಳನ್ನು ಎತ್ತ ತೊಡಗಿದರೆ ಜಾಗತೀಕರಣ ಮರೆಯಾಗಿಬಿಡುತ್ತದೆ. ಜಾಗತೀಕರಣದ ಮೇಲೆ ಗೂಬೆ ಕೂಡಿಸುವುದರ ಬಗ್ಗೆ ಆಕ್ಷೇಪ ಸಾಧ್ಯವಿಲ್ಲ. ಆದರೆ ಜಾಗತೀಕರಣಕ್ಕೆ ಪೂರ್ವದಲ್ಲಿ ಬಡವರಿಗೆ, ಮಹಿಳೆಯರಿಗೆ, ವಂಚಿತರಿಗೆ, ಅಂಚಿನಲ್ಲಿರುವವರಿಗೆ, ಪರಿಶಿಷ್ಟ ಮಹಿಳೆಯರಿಗೆ, ನಮ್ಮ ಸಮಾಜದಲ್ಲಿ ದೊರೆತ ಉತ್ತೇಜನ ನೆರವು ಸಹಾಯ ಅಷ್ಟರಲ್ಲೇ ಇದೆ! ಜಾಗತೀಕರಣವನ್ನು ಟೀಕಿಸುವ ಮೊದಲು ಅಥವಾ ಅದನ್ನು ಟೀಕಿಸುವಾಗ ಜೊತೆಯಲ್ಲಿ ಅದಕ್ಕಿಂತ ಪೂರ್ವದಲ್ಲಿದ್ದ ವ್ಯವಸ್ಥೆ ಎಷ್ಟು ಸಮರ್ಥವಾಗಿತ್ತು? ಎಷ್ಟು ಜನ ಪರವಾಗಿತ್ತು? ಎಷ್ಟು ಲಿಂಗ ಸಂವೇದಿಯಾಗಿತ್ತು? - ಮುಂತಾದ ಪ್ರಶ್ನೆಗಳನ್ನೂ ಕೇಳಿಕೊಳ್ಳಬೇಕಾಗುತ್ತದೆ. ಜಾಗತೀಕರಣವನ್ನು ಬದಿಗಿಟ್ಟು ನಮ್ಮ ಸಮಾಜದ ಬಡ-ವಂಚಿತ-ಅಂಚಿನ ಮಹಿಳೆಯರ ಬಗ್ಗೆ ಈಗಲಾದರೂ ಯೋಚಿಸುವುದನ್ನು ಕಲಿಯಬೇಕು. ಗ್ರಾಮಗಳಲ್ಲಿ, ಹಳ್ಳಿಕೊಂಪೆಗಳಲ್ಲಿ, ನಗರ-ಪಟ್ಟಣಗಳ ಕೊಳಚೆ ಪ್ರದೇಶಗಳಲ್ಲಿ, ಮುರುಕು ಜೋಪಡಿಗಳಲ್ಲಿ, ಸೇತುವೆಗಳ ಕೆಳಗೆ, ಪೈಪುಗಳ ಒಳಗೆ ನಮ್ಮ ಮಹಿಳೆಯರು ಎಷ್ಟು ಪಡಿಪಾಟಲು ಪಡುತ್ತಿದ್ದಾರೆ ಎಂಬುದನ್ನು ಯೋಚಿಸಬೇಕು.

### ಒಡವೆ - ಒಡಲು

ಜಾಗತೀಕರಣವು ಮಹಿಳೆಯರನ್ನು ಕೇವಲ ಸರಕನ್ನಾಗಿ ಮಾಡಿಬಿಡುವ ಅಪಾಯದ ಕಡೆ ಅನೇಕರು ಗಮನ ಸೆಳೆಯುತ್ತಿದ್ದಾರೆ. ಇದು ಸರಿ. ಮಹಿಳೆಯರನ್ನು ಜಾಗತೀಕರಣವು ಒಂದು ಮಾರುಕಟ್ಟೆ ಸರಕನ್ನಾಗಿ ಮಾಡಿಬಿಡುತ್ತಿದೆ. ಜಾಗತೀಕರಣದಲ್ಲಿ ಪ್ರತಿಯೊಂದೂ ಮಾರುಕಟ್ಟೆ ಮೂಲಕವೇ ಅಧಿಕೃತತೆ ಪಡೆದುಕೊಳ್ಳಬೇಕು. ಮಹಿಳೆಯರು ಇಲ್ಲಿ ಮಾರಾಟದ ಸರಕುಗಳಾಗಿಬಿಡುತ್ತಾರೆ. ಮಹಿಳೆಯರ ಅಂತಸ್ಥ ಗುಣಕ್ಕೆ ಇಲ್ಲಿ ಯಾವುದೇ ಮನ್ನಣೆ ದೊರೆಯುವುದಿಲ್ಲ. ಜಾಗತೀಕರಣಕ್ಕೆ ಮಾರುಕಟ್ಟೆಯೇ ಆರಂಭ - ಮಾರುಕಟ್ಟೆಯೇ ಅಂತ್ಯ. ಇಲ್ಲಿ ಎಲ್ಲವೂ ಮಾರುಕಟ್ಟೆ ಬೆಲೆಯಲ್ಲಿ ಮಾಪನ ಮಾಡಲಾಗುತ್ತದೆ.

ಈ ಬಗೆಯ ಸರಕೀಕರಣವನ್ನು ಜಾಗತೀಕರಣಕ್ಕೆ ಆರೋಪಿಸುವುದು ಸರಿಯಲ್ಲ. ನಮ್ಮ ಸಮಾಜವು ಲಾಗಾಯಿತಿನಿಂದ ಮಹಿಳೆಯರನ್ನು ಹೇಗೆ ನೋಡಿಕೊಂಡು - ನಡೆಸಿಕೊಂಡು ಬಂದಿದೆ? ಮಹಿಳೆಯರನ್ನು ಒಡವೆಯನ್ನಾಗಿ ನೋಡಿಕೊಂಡು ಬಂದ ಪರಂಪರೆ ನಮ್ಮದಾಗಿದೆ. ಹೆಣ್ಣನ್ನು ಹೊನ್ನು-ಮಣ್ಣುಗಳಿಗೆ ಸಂವಾದಿಯಾಗಿ ನೋಡಿಕೊಂಡು ಬರಲಾಗಿದೆ. ಹೊನ್ನು, ಮಣ್ಣುಗಳಂತೆ ಹೆಣ್ಣು ಕೂಡ ಮಾರಾಟದ ವಸ್ತು. ಯಾರಾದರೂ ಅವಳ ಮೇಲೆ ಮಾಲಿಕತ್ವವನ್ನು ಸ್ಥಾಪಿಸಬಹುದು. ಆದರೆ ಈ ಬಗೆಯ ಒಡವೆ ದೃಷ್ಟಿಕೋನವನ್ನು ತಿರಸ್ಕರಿಸಿದ ಪರಂಪರೆಯೂ ನಮ್ಮ ಸಮಾಜದಲ್ಲಿದೆ. ಹನ್ನೆರಡನೆಯ ಶತಮಾನದ ಶಿವಶರಣೆ ಗೊಗ್ಗವ್ವೆ ಒಡವೆ ಸಂಸ್ಕೃತಿಯನ್ನು ಮೀರುವ ಮಾತನಾಡುತ್ತಾಳೆ.

*ಗಂಡು ಮೋಹಿಸಿ ಹೆಣ್ಣ ಹಿಡಿದಡೆ*
*ಅದು ಒಬ್ಬರ ಒಡವೆ ಎಂದು ಅರಿಯಬೇಕು.*
*ಹೆಣ್ಣು ಮೋಹಿಸಿ ಗಂಡ ಹಿಡಿದಡೆ*
*ಉತ್ತರವಾವುದೆಂದರಿಯಬೇಕು.*
*ಈ ಎರಡರ ಉಭಯವ ಕಳೆದು ಸುಖಿನಾನಾಗಬಲ್ಲಡೆ*
*ನಾಸ್ತನಾಥನು ಪರಿಪೂರ್ಣನೆಂಬೆ.*

ಇಲ್ಲಿ ಯಾರು ಯಾರಿಗೂ ಒಡೆವೆಯಾಗಬಾರದು ಎಂಬ ವಿಚಾರವನ್ನು ಪ್ರತಿಪಾದಿಸಲಾಗಿದೆ.

ಒಟ್ಟಾರೆ ಮಹಿಳೆಯರ ಬದುಕು ಜಾಗತೀಕರಣದಿಂದ ಜರ್ಜರಿತವಾಗಿದೆ. ಇದರ ಬಗ್ಗೆ ಯಾವುದೇ ಭಿನ್ನಾಭಿಪ್ರಾಯವಿಲ್ಲ. ಆದರೆ ಜಾಗತೀಕರಣವನ್ನು ಬಿಟ್ಟು ಮಹಿಳೆ ನಮ್ಮ ಸಮಾಜದಲ್ಲಿ ತಾರತಮ್ಯ ಎದುರಿಸುತ್ತಿದ್ದಾಳೆ. ಈ ಸಂಗತಿಯು ಜಾಗತೀಕರಣದ ಚರ್ಚೆಯಲ್ಲಿ ಮರೆಯಾಗಿ ಬಿಡಬಾರದು.

**ಕೋಷ್ಟಕ - 1**

**ಕರ್ನಾಟಕದಲ್ಲಿ ದುಡಿಯುವ ವರ್ಗ : 1991**

| ಕ್ರ.ಸಂ. | ವಿವರಗಳು | ದುಡಿಮೆಗಾರರ ಸಂಖ್ಯೆ | | | ಮಹಿಳೆಯರ |
|---|---|---|---|---|---|
| | | ಮಹಿಳೆಯರು | ಪುರುಷರು (ಲಕ್ಷಗಳಲ್ಲಿ) | ಒಟ್ಟು | ಶೇಕಡಾ ಪ್ರಮಾಣ |
| 1. | ಸಾಗುವಳಿದಾರರು | 12.88 | 46.28 | 59.16 | 21.77 |
| 2. | ಕೃಷಿಕಾರ್ಮಿಕರು | 24.88 | 25.12 | 50.00 | 49.76 |
| 3. | ಹೈನುಗಾರಿಕೆ, ಅರಣ್ಯಗಾರಿಕೆ ಮೀನುಗಾರಿಕೆ, ಭೇಟಿ, ತೋಟಗಾರಿಕೆ - ಇತ್ಯಾದಿ | 1.50 | 4.67 | 6.17 | 24.31 |
| 4. | ಗಣಿಗಾರಿಕೆ ಮತ್ತು ಕಲ್ಲು ಒಡೆಯುವುದು | 0.24 | 0.92 | 1.16 | 20.68 |
| 5. | ಕುಟುಂಬ ಕೈಗಾರಿಕೆ | 1.05 | 2.17 | 3.22 | 32.61 |
| 6. | ಕುಟುಂಬೇತರ ಕೈಗಾರಿಕೆ | 3.96 | 11.33 | 15.29 | 25.90 |
| 7. | ನಿರ್ಮಾಣ | 0.39 | 3.89 | 4.28 | 9.11 |
| 8. | ವ್ಯಾಪಾರ ಮತ್ತು ವಾಣಿಜ್ಯ | 1.47 | 12.33 | 13.80 | 10.65 |
| 9. | ಸಾರಿಗೆ, ಉಗ್ರಾಣ, ಸಂಪರ್ಕ | 0.17 | 4.38 | 4.55 | 3.74 |
| 10. | ಇತರೆ | 3.54 | 11.76 | 15.30 | 23.14 |
| | **ಒಟ್ಟು** | **50.08** | **112.85** | **172.93** | **28.95** |

ಆಕರ: ಸೆನ್ಸಸ್ ಆಫ್ ಇಂಡಿಯಾ 1991. ಸೀರೀಸ್ II ಕರ್ನಾಟಕ. ಪಾರ್ಟ್ - 1-ಬಿ (i) ಪ್ರೈಮರಿ ಸೆನ್ಸಸ್ ಅಬ್‌ಸ್ಟ್ರಾಕ್ಟ್. ಜನರಲ್ ಪಾಪುಲೇಶನ್.

★★★

## ಹಿಂದುಳಿದ ವರ್ಗ ಹಾಗೂ ಅಲ್ಪಸಂಖ್ಯಾತರ ಅಭಿವೃದ್ಧಿಗಾಗಿ ಯೋಜನೆ :

ಶೈಕ್ಷಣಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದು ಸಾಮಾಜಿಕವಾಗಿ ಶೋಷಿತರಾದವರ ಅಭಿವೃದ್ಧಿಗಾಗಿ ವಿಶೇಷ ಒತ್ತುಕೊಟ್ಟು ಅವರಿಗೆ ಸಾಮಾಜಿಕ ನ್ಯಾಯ ಒದಗಿಸಿದಲ್ಲಿಮಾತ್ರ ಸಮಾನತೆ ಸಾಧಿಸುವುದು ಸಾಧ್ಯ. ಇದು ''ಸರ್ವೇಜನಾಃ ಸುಖಿನೋಭವಂತು'' ಎಂಬ ಧ್ಯೇಯ ಈಡೇರಿಕೆಗೆ ಕಾರಣವಾಗುವುದು. ದೂರದೃಷ್ಟಿನಾಯಕ ಶ್ರೀ. ಎಸ್. ಎಂ. ಕೃಷ್ಣ ಅವರ ನೇತೃತ್ವದ ಪ್ರಸಕ್ತ ಸರ್ಕಾರದ ಮಹೋದ್ದೇಶವೇ ಇದು. ಈ ದಿಸೆಯಲ್ಲಿ ಸರ್ಕಾರ ಹಿಂದುಳಿದವರ, ಅಲ್ಪಸಂಖ್ಯಾತರ, ದೀನದಲಿತರ ಹಾಗೂ ಶೋಷಿತರ ಕಲ್ಯಾಣಕ್ಕಾಗಿ ನೂತನ ಕಾರ್ಯಕ್ರಮಗಳನ್ನು ರೂಪಿಸಿ, ಅನುಷ್ಠಾನಗೊಳಿಸುವ ಮೂಲಕ ಅವರಲ್ಲಿ ಹೊಸ ಆಶಾಕಿರಣವನ್ನೇ ಮೂಡಿಸಿದೆ.

### *ಸಮಾಜ ಕಲ್ಯಾಣ ಇಲಾಖೆ*

**ಹಿಂದುಳಿದ ವರ್ಗಗಳ ಅಭಿವೃದ್ಧಿ :**

★ ಇಲಾಖೆಯ ವಿವಿಧ ಕಾರ್ಯಕ್ರಮಗಳ ಅನುಷ್ಠಾನದ ಮೂಲಕ 6,10,733 ಫಲಾನುಭವಿಗಳಿಗೆ ರೂ. 86 ಕೋಟಿ ನೆರವು.

★ ಪುಸ್ತಕ ಸಾಲಿನಲ್ಲಿ ಇಲಾಖೆ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ರೂ. 108.07 ಕೋಟಿ ಅನುದಾನ.

★ 20 ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿನಿಲಯಗಳು ಹಾಗೂ ಒಂದು ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿ ನಿಲಯಕ್ಕೆ ಮಂಜೂರು. ಒಟ್ಟು ಸಾಮರ್ಥ್ಯ 1,050 ವಿದ್ಯಾರ್ಥಿಗಳು.

★ ಒಟ್ಟು ರೂ. 585.49 ಲಕ್ಷಗಳ ವೆಚ್ಚದಲ್ಲಿ 40 ಮೆಟ್ರಿಕ್ - ಪೂರ್ವ ಹಾಗೂ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳ ಕಟ್ಟಡ ನಿರ್ಮಾಣ ಪೂರ್ಣ. 2,55,769 ಮೆಟ್ರಿಕ್ ಪೂರ್ವ ವಿದ್ಯಾರ್ಥಿಗಳಿಗೆ ರೂ. 257.07 ಲಕ್ಷ ವಿದ್ಯಾರ್ಥಿ ವೇತನ ವಿತರಣೆ.

★ ರೂ. 532.37 ಲಕ್ಷಗಳ ಮೌಲ್ಯದ 1,67,340 ವಿದ್ಯಾರ್ಥಿಗಳಿಗೆ ಶುಲ್ಕ ವಿನಾಯತಿ ಸೌಲಭ್ಯ.

★ ಮಾಂಗಲ್ಯ ಭಾಗ್ಯ ಯೋಜನೆಯಡಿಯಲ್ಲಿ ರೂ. 22.10 ಲಕ್ಷಗಳ ವೆಚ್ಚದಲ್ಲಿ 442 ಫಲಾನುಭವಿಗಳಿಗೆ ಆರ್ಥಿಕ ಸಹಾಯ.

★ 15.296 ಫಲಾನುಭವಿಗಳಿಗೆ ಕರ್ನಾಟಕದ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ಮೂಲಕ ರೂ. 2.119.17 ಲಕ್ಷ ಆರ್ಥಿಕ ನೆರವು.

**ಅಲ್ಪಸಂಖ್ಯಾತರ ಅಭಿವೃದ್ಧಿ :**

★ ಅಲ್ಪಸಂಖ್ಯಾತರ ಅಭಿವೃದ್ಧಿಗಾಗಿಯೇ ಪ್ರತ್ಯೇಕ ಇಲಾಖೆ 1999-2000ನೇ ಸಾಲಿನಿಂದ ಕಾರ್ಯಾರಂಭ. ಪ್ರಸಕ್ತ ಸಾಲಿನಲ್ಲಿ ಈ ಇಲಾಖೆಯ ಕಾರ್ಯಕ್ರಮಗಳ ಜಾರಿಗಾಗಿ ರೂ. 263.40 ಲಕ್ಷ ಅನುದಾನ ಬಿಡುಗಡೆ.

★ ಶಿವಮೊಗ್ಗ, ಬಳ್ಳಾರಿ, ಹುಬ್ಬಳ್ಳಿ ಮತ್ತು ಬೆಳಗಾಂ ನಗರಗಳಲ್ಲಿ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಪ್ರಾರಂಭ. ವಿದ್ಯಾರ್ಥಿಗಳಿಗೆ ಉಚಿತ ಶಿಕ್ಷಣ, ಊಟ ಮತ್ತು ವಸತಿ ಸೌಲಭ್ಯಗಳಿಗಾಗಿ ರೂ. 60.00 ಲಕ್ಷಗಳ ವೆಚ್ಚ.

★ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯರಿಗಾಗಿ ಬೆಂಗಳೂರು, ಮೈಸೂರು, ಧಾರವಾಢ, ಮಂಗಳೂರು ಮತ್ತು ಗುಲ್ಬರ್ಗಾ ನಗರಗಳಲ್ಲಿ 5 ವಿದ್ಯಾರ್ಥಿನಿಲಯಗಳ ಸ್ಥಾಪನೆ.

★ ಸಾಂಸ್ಕೃತಿಕ ಹಾಗೂ ಸಾಮಾಜಿಕ ಚಟುವಟಿಕೆಗಳಿಗಾಗಿ ಸಮುದಾಯ ಭವನಗಳ ನಿರ್ಮಾಣಕ್ಕಾಗಿ ಅಲ್ಪಸಂಖ್ಯಾತ ಸ್ವಯಂಸೇವಾ ಸಂಸ್ಥೆಗಳಿಗೆ ಗರಿಷ್ಠ ರೂ. 5 ಲಕ್ಷ ಅನುದಾನ. ಈ ಉದ್ದೇಶಕ್ಕಾಗಿ ರೂ. 50 ಲಕ್ಷ ಮೀಸಲು.

★ ಅಲ್ಪಸಂಖ್ಯಾತರ ವರ್ಗಗಳಿಗೆ ಸೇರಿದ ಐ.ಟಿ.ಐ / ಡಿಪ್ಲೋಮಾ ತರಗತಿಗಳ 840ಕ್ಕೂ ಹೆಚ್ಚಿನ ವಿದ್ಯಾರ್ಥಿಗಳಿಗೆ ರೂ. 9.25 ಲಕ್ಷ ಶಿಷ್ಯವೇತನ.

★ 52 ಕಾನೂನ ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿ.

★ ರೂ. 1,536.42 ಲಕ್ಷಗಳ ವೆಚ್ಚದಲ್ಲಿ 12,047 ಫಲಾನುಭವಿಗಳಿಗೆ ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮದ ಮೂಲಕ ನೆರವು.

**ಸಾಧಿಸಿದ್ದು ಬಹಳಷ್ಟು, ಸಾಧಿಸಬೇಕಾಗಿರುವುದು ಇನ್ನು ಬಹಳಷ್ಟು.**

**- ಕರ್ನಾಟಕ ವಾರ್ತೆ**

# ಗುಜರಾತಿನ ಬರ್ಬರ ಹತ್ಯೆಗಳನ್ನು ನಿಲ್ಲಿಸಿ



ಗುಜರಾತಿನ ಗೋಧ್ರಾದಲ್ಲಿ ಫೆಬ್ರುವರಿ 27ರಂದು ನಡೆದ ಸಬರಮತಿ ಎಕ್ಸ್‌ಪ್ರೆಸ್‌ನ ಹತ್ಯಾಕಾಂಡ ಮತ್ತು ಆ ನಂತರದ ಘಟನೆಗಳ ಸರಮಾಲೆ ಇತಿಹಾಸದಲ್ಲಿ ಮರೆಯಲಾಗದ ಕಡುಪಾತಕ ಕೃತ್ಯ. ಅಂತಹ ಅಮಾನವೀಯವಾದ, ಪೈಶಾಚಿಕ ಪ್ರಜ್ಞೆ ನಡೆಸಿದ ದಾಂಧಲೆಯಲ್ಲಿ ನರಳಿದವರು, ನೋವಿಗೀಡಾದವರು ಉರಿದು ಭಸ್ಮವಾದವರಲ್ಲಿ ಮಹಿಳೆಯರೇ ಹೆಚ್ಚು. ತುಂಬು ಬಸುರಿಯ ಗರ್ಭದಿಂದ ಭ್ರೂಣವನ್ನು ಹೊರತೆಗೆದು ಬೆಂಕಿಗೆ ಹಾಕಿ ಕೇಕೆ ಹಾಕಿದವರಿದ್ದಾರೆ ; ಮಕ್ಕಳು ಮರಿಯೆನ್ನದೆ, ತಾಯಂದಿರು ಮುದುಕಿಯರೆನ್ನದೆ ಹೆಂಗಸರ ಮೇಲೆ ಅತ್ಯಾಚಾರ ನಡೆಸಿ ಅವರ ಕುರುಹು ಉಳಿಯದಂತೆ ಅವರನ್ನು ಸುಟ್ಟು ಬೂದಿ ಮಾಡಿದ ಹಲವಾರು ಸಂಗತಿಗಳು ನಡೆದಿವೆ.

ಭಾರತೀಯ ಜನತಾಪಕ್ಷ, ಆರ್.ಎಸ್.ಎಸ್. ಮತ್ತು ವಿಶ್ವ ಹಿಂದೂ ಪರಿಷತ್ತಿನ ಘೋಷಣೆಗಳಲ್ಲಿ ತಾಯಂದರಿಗೆ ವಿಶೇಷ ಗೌರವ ನೀಡುವ ಮಾತುಗಳು ಕೇಳಿಬರುತ್ತವೆ. ಭಾರತೀಯ ಸಂಸ್ಕೃತಿಯಲ್ಲಿ ಮಹಿಳೆಯರನ್ನು ದೇವತೆಗಳಂತೆ ಕಾಣಲಾಗುತ್ತಿದೆ, ಎಂದು ಪದೇ ಪದೇ ಹೇಳುತ್ತಿರುತ್ತಾರೆ. ಆದರೆ ಗುಜರಾತಿನಲ್ಲಿ ಮಹಿಳೆಯರ, ತಾಯಂದಿರ, ಮಕ್ಕಳ ಮಾರಣಹೋಮ ನಡೆದಿದೆ. ಅತ್ಯಂತ ಅಸಹ್ಯವಾದ, ಬರ್ಬರ ರೀತಿಯಲ್ಲಿ ಮಹಿಳೆಯರನ್ನು ಹಿಂಸಿಸಿ ಕೊಲ್ಲಲಾಗುತ್ತಿದೆ. ಮಾತೃತ್ವ, ಹೆಣ್ಣಿನ ಶೀಲರಕ್ಷಣೆ - ಇವು ಯಾವುದೇ ಒಂದು ಕೋಮಿಗೆ ಮಾತ್ರ ಸಲ್ಲುವ ಅಂಶವೇ? ಇದೆಲ್ಲ ಪ್ರಶ್ನೆಗಳನ್ನು ಇಂದಿನ ಮಹಿಳಾ ಸಮುದಾಯ ಕೇಳುತ್ತದೆ.

ಗಾಂಧೀಜಿಯವರ ಸಬರಮತಿ ಆಶ್ರಮದಲ್ಲಿ ಇದೇ ಏಪ್ರಿಲ್ 7 ರಂದು ಶಾಂತಿಸಭೆ ನಡೆಯುತ್ತಿದ್ದಾಗ ಭಾರತೀಯ ಜನತಾಪಕ್ಷದ ಯುವಜನ ಘಟಕದ ಅಧ್ಯಕ್ಷದ ನೇತೃತ್ವದಲ್ಲಿ ಪುಂಡರ ಗುಂಪೊಂದು ನುಗ್ಗಿ ದಾಂಧಲೆ ನಡೆಸಿತು. ಅಲ್ಲಿದ್ದ ಮೇಧಾ ಪಾಟ್ಕರ್‌ರವರನ್ನು ಥಳಿಸಿತು. ಸಬರಮತಿ ಆಶ್ರಮದಲ್ಲಿ ದಾಂಧಲೆ ನಡೆಸಿದವರನ್ನು ಹಿಡಿದು ಹೊರದೂಡುವ ಬದಲು ಪೋಲಿಸರು ಶಾಂತಿಕಾರ್ಯಕರ್ತರನ್ನು ಮತ್ತು ಮಾಧ್ಯಮಗಳ ವರದಿಗಾರರನ್ನು ಸದೆಬಡಿದಿದ್ದಾರೆ.

ಗುಜರಾತಿನಲ್ಲಿ ಮಹಿಳೆಯರು ಮತ್ತು ಮಕ್ಕಳು ಸಂಕಷ್ಟಕ್ಕೆ ಗುರಿಯಾಗಿರುವುದು ಇಡೀ ಭಾರತಕ್ಕೆ ನೋವನ್ನುಂಟು ಮಾಡಿದೆ. ಅತೀವವಾಗಿ ನೊಂದಿರುವ ಅವರೆಲ್ಲರಿಗೆ ಸಾಂತ್ವನ ವ್ಯಕ್ತ ಪಡಿಸಲು ಮತ್ತು ದೌರ್ಜನ್ಯವೆಸಗಿದ ಎಲ್ಲರನ್ನೂ ಖಂಡಿಸಲು ಬೆಂಗಳೂರಿನಲ್ಲಿ ಏಪ್ರಿಲ್ 11ರಂದು ಪ್ರತಿಭಟನಾ ಸಭೆ ನಡೆಯಿತು. ಈ ಕಾರ್ಯಕ್ರಮದಲ್ಲಿ ನಗರದ ಮಹಿಳಾ ಸಂಘಟನೆಗಳಾದ ಜನವಾದಿ ಮಹಿಳಾ ಸಂಘಟನೆ, ಸುಮಂಗಲಿ ಸೇವಾಶ್ರಮ, ನೆರವು, ನ್ಯಾಷನಲ್ ಫೆಡರೇಷನ್ ಆಫ್ ಇಂಡಿಯನ್ ವುಮೆನ್, ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ - ಮುಂತಾದ ಮಹಿಳಾಪರ ಸಂಗತಿಗಳು ಭಾಗವಹಿಸಿದ್ದರು. ಈ ಸಾರ್ವಜನಿಕ ಸಭೆಯಲ್ಲಿ ಮಾತನಾಡಿದ ಎಲ್ಲ ಭಾಷಣಕಾರರು ಗುಜರಾತಿನ ದೌರ್ಜನ್ಯಗಳಲ್ಲಿ ಅಪರಾಧಿಗಳನ್ನು ಹಿಡಿದು ಶಿಕ್ಷಿಬೇಕು, ಮುಖ್ಯಮಂತ್ರಿ ನರೇಂದ್ರ ಮೋದಿ ತೊಲಗಬೇಕು, ಮಹಿಳೆಯರು ಹಾಗೂ ಮಕ್ಕಳ ರಕ್ಷಣೆಗೆ ಎಲ್ಲ ಕ್ರಮಗಳನ್ನು ಕೈಗೊಳ್ಳಲು ಕೇಂದ್ರ ಸರ್ಕಾರ ಮಧ್ಯಪ್ರವೇಶ ಮಾಡಬೇಕೆಂದು ಒತ್ತಾಯಿಸಿದವು.

# ಗುಜರಾತ್ ಹಿಂಸಾಕಾಂಡದ ವಿರುದ್ಧ ಮಹಿಳೆಯರು



ದೇಶದ ಸಂವಿಧಾನದ ಬೇರುಗಳನ್ನೇ ಅಲ್ಲಾಡಿಸುತ್ತಿರುವ ಗುಜರಾತ್ ಹಿಂಸಾಕಾಂಡ ಎಲ್ಲ ಧರ್ಮದ ಬಹುಸಂಖ್ಯಾತ ಜನರ ಮುಂದಿರುವ ದೊಡ್ಡ ಸವಾಲಾಗಿದೆ. ಬಹುಸಂಖ್ಯಾತ ಕೋಮುವಾದವು ಫ್ಯಾಸಿಸಂಗೆ ಎಡೆಮಾಡಿಕೊಡುತ್ತದೆ. ಅಲ್ಪಸಂಖ್ಯಾತ ಕೋಮುವಾದವು ಪ್ರತ್ಯೇಕತಾವಾದಕ್ಕೆ ದಾರಿ ಮಾಡಿಕೊಡುತ್ತದೆ. ಆದ್ದರಿಂದ ದೇಶದ ಐಕ್ಯತೆಯ ದೃಷ್ಟಿಯಿಂದ ಎಲ್ಲರೂ ಎಚ್ಚರವಹಿಸಬೇಕಾಗಿದೆ.

ಗುಜರಾತಿನಲ್ಲಿ ಕಣ್ಣೆದುರೇ ನಡೆದ ಹೃದಯ ವಿದ್ರಾವಕ ಘಟನೆಗಳ ಜೀವಂತ ಸಾಕ್ಷಿಗಳು ನಿರಾಶ್ರಿತ ಶಿಬಿರಗಳಲ್ಲಿ ದಿನದೂಡುತ್ತಿದ್ದಾರೆ. ಅಲ್ಪಸಂಖ್ಯಾತ ಸಮುದಾಯವನ್ನೇ ಗುರಿ ಇರಿಸಿ ಇಂದಿಗೂ ನಡೆಸುತ್ತಿರುವ ದೌರ್ಜನ್ಯಗಳಿಂದ ಆ ಜನ ತಲ್ಲಣಿಸಿದ್ದಾರೆ. ಮಹಿಳೆ ಮತ್ತು ಮಕ್ಕಳನ್ನು ನಿರ್ದಿಷ್ಟ ಗುರಿಯನ್ನಾಗಿಸಿಕೊಂಡು ಅವರ ಮೇಲೆ ದೌರ್ಜನ್ಯವೆಸಗಲಾಗಿದೆ. ಗರ್ಭಿಣಿ, ಬಾಣಂತಿಯರೆಂದು ಲೆಕ್ಕಿಸದೆ, ಆಗ ತಾನೆ ಹುಟ್ಟಿದ ಮಗುವನ್ನು ತಾಯ ಕೈಯಿಂದ ಕಿತ್ತೆಸೆದು, ಅವರ ಮೇಲೆ ಅತ್ಯಾಚಾರ ಮಾಡಿದ ಘಟನೆಗಳು ನಡೆದಿವೆ. ಚಿಕ್ಕ ಮಕ್ಕಳ ಕಣ್ಣೆದುರೇ ಅವರ ಕುಟುಂಬದ ಹೆಣ್ಣುಮಕ್ಕಳ ಮೇಲೆ ಅತ್ಯಾಚಾರ ನಡೆದಿದೆ. ಇಂತಹ ಹಲವು ಘಟನೆಗಳಿಗೆ ಮೂಕ ಸಾಕ್ಷಿಗಳಾದ ಭಯಭೀತ ಮಕ್ಕಳ ಸಂಖ್ಯೆ 4200ಕ್ಕೂ ಹೆಚ್ಚು ಎಂದು ಪ್ರತ್ಯಕ್ಷದರ್ಶಿಗಳು ಹೇಳುತ್ತಿದ್ದಾರೆ. ಇಂತಹ ಕೃತ್ಯಗಳಿಂದ ರಕ್ಷಣೆ ನೀಡಬೇಕಾದ ಪೋಲೀಸರು ಇದಕ್ಕೆ ಸಹಕರಿಸುತ್ತಿದ್ದಾರೆಂಬುದು ಘಟನೆಗಳಿಗೆ ರಾಜ್ಯ ಸರ್ಕಾರವೇ ನೇರ ಜವಾಬ್ದಾರವೆಂಬುದನ್ನು ಬಿಂಬಿಸುತ್ತದೆ. ಕೇಂದ್ರ ಸರ್ಕಾರ ಈ ರಾಜ್ಯದ ಮುಖ್ಯಮಂತ್ರಿಗಳಿಗೆ ಎಚ್ಚರಿಕೆ ಕೊಡುವ ಬದಲು ಶಹಬ್ಬಾಸ್ ಹೇಳುತ್ತಿದೆ.

ಇವೆಲ್ಲವನ್ನೂ ಪ್ರತಿಭಟಿಸಲು ದೇಶದ ಮಹಿಳಾ ಸಮುದಾಯ ಎಲ್ಲ ರಾಜ್ಯಗಳಲ್ಲೂ ಕೆಲವು ಬೇಡಿಕೆಗಳೊಂದಿಗೆ ಮೇ 13, 2002ರಂದು 'ಗುಜರಾತ್ ದಿನ'ವನ್ನು ಆಚರಿಸಲಾಯಿತು : 1) ಮಹಿಳೆಯರ ಮೇಲೆ ನಡೆದ ಅತ್ಯಾಚಾರ ಮತ್ತು ಲೈಂಗಿಕ ದೌರ್ಜನ್ಯಗಳಿಗೆ ಕಾರಣರಾದವರ ಮೇಲೆ ತತ್‌ಕ್ಷಣ ಎಫ್.ಐ.ಆರ್‌ನ್ನು ಹಾಕಬೇಕು, ಬಂಧಿಸಿ ಶಿಕ್ಷೆಗೆ ಗುರಿಪಡಿಸಬೇಕು. 2) ಇಂತಹ ಸಾಮೂಹಿಕ ಹಲ್ಲೆಗಳಾದಾಗ ಅನುಸರಿಸಬೇಕಾದ ಅಂತರರಾಷ್ಟ್ರೀಯ ಅಂಗೀಕಾರದ ವಿಶೇಷ ನ್ಯಾಯಾಲಯಗಳನ್ನು ಸ್ಥಾಪಿಸಿ, ಕಾಲಬದ್ಧಮಿತಿಯಲ್ಲಿ ನ್ಯಾಯ ದೊರಕಿಸುವ ಪ್ರಯತ್ನ ಮಾಡಬೇಕು. 3) ಅನಾಥರಾದ ಮಕ್ಕಳಿಗೆ ಮತ್ತು ಕುಟುಂಬಗಳಿಗೆ ಮರುವಸತಿ ಕಲ್ಪಿಸುವ ವಿಶೇಷ ಯೋಜನೆಗಳನ್ನು ಕೂಡಲೇ ವ್ಯವಸ್ಥೆ ಮಾಡಬೇಕು. 4) ರಾಜ್ಯ ಸರ್ಕಾರ ನಿರಾಶ್ರಿತ ಶಿಬಿರಗಳನ್ನು ಮುಂದುವರೆಸಬೇಕು.

ಬೆಂಗಳೂರು ನಗರದ ಹಲವು ಮಹಿಳಾ ಸಂಘಟನೆಗಳು, ಸ್ವಯಂ ಸೇವಾ ಸಂಸ್ಥೆಗಳು ಮೇ 13ರಂದು ಸಾರ್ವಜನಿಕ ಪ್ರತಿಭಟನಾ ಸಭೆ ನಡೆಸಿದವು. ಈ ಸಭೆಯನ್ನುದ್ದೇಶಿಸಿ ವೀರಭದ್ರ ಚೆನ್ನಮಲ್ಲ ಸ್ವಾಮೀಜಿ, ಹೇಮಲತಾ ಮಹಿಷಿ, ಪ್ರೊ. ರಾಮೇಶ್ವರಿ ವರ್ಮಾ, ಪ್ರೊ. ಬಾಬು ಮಾಥ್ಯೂ ಮುಂತಾದವರು ಮಾತನಾಡಿದರು. ಮಹಿಳಾ ಸಂಘಟನೆಗಳ ಕಾರ್ಯಕರ್ತರು ಜಾಗೃತಿ ಗೀತೆಗಳನ್ನು ಹಾಡಿದರು.

# ಗ್ರಾಮೀಣ ಮೂಲಭೂತ ಸೌಕರ್ಯಗಳಲ್ಲಿ ''ಕರ್ನಾಟಕದ ಮುನ್ನಡೆ''

**ಜಾತಿ, ಮತ, ಪಂಥಗಳ ಭೇದಭಾವ ತೊರೆದು ನಾವೆಲ್ಲರೂ ರಾಷ್ಟ್ರದ ಅಭಿವೃದ್ಧಿಗೆ ಕಟಿಬದ್ಧರಾಗೋಣ**

**ಕುಡಿಯುವ ನೀರು :**

★ ಕುಡಿಯುವ ನೀರಿನ ಗುಣಮಟ್ಟಕ್ಕೆ ಆದ್ಯತೆ

★ ನೀರಿನಲ್ಲಿ ಫ್ಲೋರೈಡ್, ಕಬ್ಬಿಣದ ಅಂಶ ಹೆಚ್ಚಿಗೆ ಇರುವ ವಸತಿ ಪ್ರದೇಶಗಳಿಗೆ ಸುರಕ್ಷಿತ ಕುಡಿಯುವ ನೀರು ಒದಗಿಸಲು ಹಂತ ಹಂತವಾದ ಯೋಜನೆ.

★ ಗ್ರಾಮೀಣ ಕುಡಿಯುವ ನೀರು ಸರಬರಾಜು ಮತ್ತು ನೈರ್ಮಲ್ಯಕಾರ್ಯಕ್ರಮದಡಿ 680 ಯೋಜನೆಗಳ ಕಾರ್ಯಾರಂಬ.

**ನೀರಾವರಿ :**

★ ಹೊಸಕೆರೆಗಳ ನಿರ್ಮಾಣ. ಹಳೆಕೆರೆಗಳ ಜೀರ್ಣೋದ್ದಾರ ಒಡ್ಡುಗಳು, ಅಣೆಕಟ್ಟುಗಳು ಹಾಗೂ ಕಟ್ಟೆಗಳು. ಏತ ನೀರಾವರಿ ಯೋಜನೆ ಅನುಷ್ಠಾನಕ್ಕೆ ಒತ್ತು.

★ ಪ್ರತಿ ಜಿಲ್ಲೆಯಲ್ಲಿ ಕೆರೆ ಜೀರ್ಣೋದ್ದಾರಕ್ಕಾಗಿ ರೈತ ಕಾಯಕಕೆರೆ ಕಾರ್ಯಕ್ರಮದ ಪ್ರಾರಂಭ

★ ಕೃಷ್ಣಭಾಗ್ಯ ಜಲನಿಗಮದಿಂದ ಮಾರ್ಚಿ ವೇಳೆಗೆ 25,000 ಹೆಕ್ಟೇರ್ ಭೂಮಿಗೆ ನೀರಾವರಿ ಸೌಲಭ್ಯ ಲಭ್ಯತೆ.

★ ಹಿಪ್ಪರಗಿ ಯೋಜನೆ ಹಾಗೂ ಸಿಂಗಟಾಲೂರು ಏತ ನೀರಾವರಿ ಯೋಜನೆಯ ವ್ಯಾಪ್ತಿ ವಿಸ್ತರಣೆ.

**ಶಿಕ್ಷಣ :**

★ ಸರ್ಕಾರಿ ಶಿಕ್ಷಣ ಸಂಸ್ಥೆಗಳಲ್ಲಿ ಹೆಣ್ಣುಮಕ್ಕಳಿಗೆ ಹನ್ನೆರಡನೆಯ ತರಗತಿಯವರೆಗೆ ಉಚಿತ ಶಿಕ್ಷಣ.

★ ಉಚಿತ ಪಠ್ಯ ಪುಸ್ತಕಗಳ ವಿತರಣೆ. 7ನೇ ತರಗತಿವರೆಗಿನ ಎಲ್ಲಾ ವಿದ್ಯಾರ್ಥಿಗಳಿಗೆ ವಿಸ್ತರಣೆ.

★ ಈಶಾನ್ಯ ಕರ್ನಾಟಕದ ಶೈಕ್ಷಣಿಕವಾಗಿ ಹಿಂದುಳಿದಿರುವ ಐದು ಜಿಲ್ಲೆಗಳಲ್ಲಿ ಸಾಕ್ಷರತೆ ಹೆಚ್ಚಿಸಲು ಮೇಲ್ವಿಚಾರಣೆ ನಡೆಸುವುದಕ್ಕಾಗಿ ಪ್ರತ್ಯೇಕ ನಿರ್ದೇಶನಾಲಯದ ರಚನೆ.

★ ಸೇವೆಯಲ್ಲಿರುವ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ತರಬೇತಿ ನೀಡಲು ಚೈತನ್ಯ ಕಾರ್ಯಕ್ರಮದ ಅನುಷ್ಠಾನ.

★ ಏಳು ಈಶಾನ್ಯ ಜಿಲ್ಲೆಗಳಲ್ಲಿ ಮಕ್ಕಳಿಗೆ ಬಿಸಿ ಊಟ ಒದಗಿಸಲು ಮಧ್ಯಾಹ್ನದ ಊಟದ ಯೋಜನೆ.

★ 1 ರಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ಅಭ್ಯಾಸ ಮಾಡಿದ ವಿದ್ಯಾರ್ಥಿಗಳಿಗೆ ವೃತ್ತಿ ಶಿಕ್ಷಣದಲ್ಲಿ ಶೇಕಡಾ 5 ರಷ್ಟು ಮೀಸಲಾತಿ.

★ ಮಹಿಳೆಯರು ಮತ್ತು ಮಕ್ಕಳ ಅಭಿವೃದ್ಧಿಗೆ ''ಮನೆಬೆಳಕು'' ಮತ್ತು ''ಉದ್ಯೋಗಿನಿ'' ಯೋಜನೆಗಳ ಅನುಷ್ಠಾನ.

**ಕಾನೂನು ಮತ್ತು ಸುವ್ಯವಸ್ಥೆ :**

★ ಭಯೋತ್ಪಾದಕರ ಮತ್ತು ರಾಷ್ಟ್ರವಿರೋಧಿ ಚಟುವಟಿಕೆಗಳನ್ನು ತಡೆಯಲು ಪೊಲೀಸ್ ಆಡಳಿತ ಸನ್ನದ್ದಗೊಳಿಸಲು ಕ್ರಮ.

★ ಕೋಮು ಸೌಹಾರ್ದತೆಯ ಕಾಪಾಡಲು ಮುತುವರ್ಜಿ.

★ ಮೂರು ಮಹಿಳಾ ಪೊಲೀಸ್ ಠಾಣೆಗಳು ಸೇರಿದಂತೆ ಹೊಸ ಪೊಲೀಸ್ ಠಾಣೆಗಳ ಮಂಜೂರು.

**- ಕರ್ನಾಟಕ ವಾರ್ತೆ**

*With Best Compliments From :*

## RESERVE BANK EMPLOYEES' CO-OPERATIVE BANK LIMITED,

**10/3/8, Nrupathunga Road, Bangalore - 560 001**

**Financial Position as on 31st March 2001.**

***(Rupees in Lakhs)***

| | |
|---|---|
| **Share Capital** | **144.19** |
| **Deposits** | **2617.54** |
| **Reserves** | **189.71** |
| **Borrowings** | **-NIL-** |
| **Loans** | **1513.83** |
| **Profits** | **55.26** |

## Board of Directors :

| | |
|---|---|
| **Sri N. K. Srikantaiah** | **President** |
| **Sri P. C. Sudheer Kumar** | **Vice President** |
| **Sri S. Satish Kumar** | **Executive Director** |
| **Sri N. Prem Kumar** | **Treasurer** |
| **Sri T. Dhandapani** | **Commuttee Auditor** |
| **Sri H. T. Anantharamaiah** | **Director** |
| **Sri S. Jayawanth Kumar** | **Director** |
| **Sri Sylvester D'Souza** | **Director** |
| **Sri K. Krishna Murthy** | **Director** |
| **Smt. V. Gayathri** | **Director** |
| **Smt. Vasanthi Sagar** | **Director** |

# ಕೌಟುಂಬಿಕ ಹಿಂಸೆ

ಇಂದಿನ ಕೇಂದ್ರ ಸರ್ಕಾರ ಮಹಿಳೆಯರಿಗೆಂದೇ ತರಲು ಹೊರಟಿರುವ ಕೌಟುಂಬಿಕ ದೌರ್ಜನ್ಯಗಳಿಂದ ರಕ್ಷಣೆಯ ಮಸೂದೆ 2001, ಅರ್ಧ ಬೆಂದ ಅಡಿಗೆಯಂತಿದೆ. ದೇಶದಲ್ಲಿ ಇತ್ತೀಚಿಗೆ ನಡೆದ ಹಲವಾರು ವಿದ್ಯಮಾನಗಳಿಂದಾಗಿ ಅದು ಪಾರ್ಲಿಮೆಂಟಿನಲ್ಲಿ ಮಂಡನೆಯಾಗಿ ಅಂಗೀಕಾರವಾಗದೇ ಉಳಿದಿದ್ದು ಒಂದು ರೀತಿಯಲ್ಲಿ ಮಹಿಳೆಯರ ಸುಕೃತವೆನ್ನಬಹುದು. ಈ ಮಸೂದೆಯನ್ನು ಕುರಿತು ಇನ್ನೂ ಸಾಕಷ್ಟು ಚರ್ಚೆಗಳಾಗಿ, ತಿದ್ದುಪಡಿಗಳಾಗಬೇಕಾದ ಅವಶ್ಯಕತೆಯಿದೆ.

ಕಾನೂನುತಜ್ಞರು ಮತ್ತು ಮಹಿಳಾ ಕಾರ್ಯಕರ್ತರೊಂದಿಗೆ ಸಮಾಲೋಚಿಸದೆ ಕೇಂದ್ರ ಸರ್ಕಾರವು ಗಡಿಬಿಡಿಯಲ್ಲಿ ಈ ಮಸೂದೆಯನ್ನು ಪಾರ್ಲಿಮೆಂಟಿನಲ್ಲಿ ಮಂಡಿಸುವ ಅವಸರ ತೋರಿಸುವುದಾದರೂ ಏಕೆ? 'ಮಹಿಳಾ ಸಶಕ್ತೀಕರಣ' ವರ್ಷವೆಂದು 2001ನ್ನು ಘೋಷಿಸಿದಾಗ', ತಾನು ಸ್ತ್ರೀಪರ ಸರ್ಕಾರ ಎಂಬುದನ್ನು ಜಾಹೀರುಮಾಡುವ ಸಂಭ್ರಮದಲ್ಲಿ ಅವಸರದಲ್ಲಿ ಈ ಮಸೂದೆಯನ್ನು ತರಲಾಗಿದೆ. ಆದರೆ ಈ ಮಸೂದೆಯಲ್ಲಿನ ಸಮಸ್ಯೆಯೆಂದರೆ ಇದು ನೊಂದ ಮಹಿಳೆಗೆ ರಕ್ಷಣೆಯನ್ನೂ ನೀಡುವುದಿಲ್ಲ. ಹಾಗೆಯೇ ಕೌಟುಂಬಿಕ ದೌರ್ಜನ್ಯಕ್ಕೆ ತಡೆಯೊಡ್ಡುವುದೂ ಇಲ್ಲ.

ಕೌಟುಂಬಿಕ ದೌರ್ಜನ್ಯದ ತಡೆಯ ಈ ಮಸೂದೆಯ ಚರ್ಚೆಯನ್ನು ಅರ್ಥಮಾಡಿಕೊಳ್ಳದ ಕೆಲವರು ಪ್ರಶ್ನಿಸಬಹುದು - ಮಹಿಳೆಯರ ಮೇಲಿನ ಕ್ರೌರ್ಯವನ್ನು ಶಿಕ್ಷಿಸಲು ಈಗಿರುವ ಕಾನೂನುಗಳು ಸಾಲವೇ? ಮತ್ತೊಂದು ಹೊಸ ಕಾನೂನು ಏಕೆ ಬೇಕಿದೆ? ಈಗಿರುವ ಕಾನೂನುಗಳೇ ಸಾಕಷ್ಟಿಲ್ಲವೇ? ಪಿತೃಪ್ರಾಧ್ಯಾನ್ಯತೆಯ ದೃಷ್ಟಿಕೋನದ ಎಲ್ಲ ಸಮಸ್ಯೆಗಳನ್ನು ಈಗಿರುವ ಕಾನುನು ನಿರ್ವಹಿಸುವುದಿಲ್ಲವೇ? ಮನೆಯೊಳಗೆ ಗಂಡ - ಹೆಂಡಿರ ನಡುವೆ ಕಲಹಕ್ಕೆ ಕಾನೂನು ಏನು ಮಾಡಲು ಸಾಧ್ಯ?

ಹೌದು. ಈ ಎಲ್ಲ ಪ್ರಶ್ನೆಗಳೂ ಒಂದು ಅರ್ಥದಲ್ಲಿ ನಿಜವೇ. ಆದರೂ ಈಗಿರುವ ಕಾನೂನುಗಳಿಗೆ ಕೆಲವು ಮಿತಿಗಳಿವೆ ಕೆಲವೊಂದು ವಿಶೇಷವಾದ ದೌರ್ಜನ್ಯಗಳಿಗೆ ಪ್ರತ್ಯೇಕ ಕಾನೂನುಗಳ ಅಗತ್ಯವಿದೆ. ಉದಾಹರಣೆಗೆ ವರದಕ್ಷಿಣೆಯ ಸಮಸ್ಯೆ. ಹಾಗೆಯೇ ಕುಟುಂಬದೊಳಗಿನ ದೌರ್ಜನ್ಯಗಳಿಗೂ ಪ್ರತ್ಯೇಕ ಕಾನೂನಿನ ಅಗತ್ಯವಿದೆ. ಹೆಂಗಸರನ್ನು ಅವರ ಶೀಲ ಶಂಕಿಸಿ ಹಿಂಸಿಸಬಹುದು. ಅಡಿಗೆ ಸರಿಯಿಲ್ಲವೆಂದು, ಮಕ್ಕಳನ್ನು ಸರಿಯಾಗಿ ನೋಡಿಕೊಳ್ಳುತ್ತಿಲ್ಲವೆಂದು, ಅತ್ತೆ, ಮಾವಂದಿರಿಗೆ ಗೌರವ ಕೊಡುತ್ತಿಲ್ಲವೆಂದು, ಗಂಡನಿಗೆ ತಿಳಿಸದೆ ಮನೆಯಿಂದ ಹೊರಹೋದದ್ದಕ್ಕೆ ದಂಡನೆಗೆ ಗುರಿಯಾಗಬಹುದು.

ಈ ದೌರ್ಜನ್ಯಗಳಿಗೆ ಗುರಿಯಾದ ಮಹಿಳೆಯರು ಕಾನೂನಿನ ಆಶ್ರಯ ಪಡೆಯಲು ಹೋದರೆ ಅವಳನ್ನು ಮನೆಯಿಂದ ಹೊರಗೆಸೆಯಬಹುದು. ಆದ್ದರಿಂದ ಅವಳು ನಿರಾಶ್ರಿತಳಾಗಿ ಬೀದಿಗೆ ಬೀಳಬೇಕಾಗಬಹುದು. ಅಂತಹ ಸಂದರ್ಭದಲ್ಲಿ ಪೋಲೀಸ್‌ರಿಗೆ ದೂರು ಕೊಟ್ಟರೂ ಹಿಂದಕ್ಕೆ ಪಡೆಯಲು ಒತ್ತಡ ತರಬಹುದು. ಆರ್ಥಿಕ ಸ್ವಾತಂತ್ರ್ಯವಿಲ್ಲದ ಯಾವ ಮಹಿಳೆಯೂ ಮನೆಯಿಂದ ಹೊರಗೆ ಹೋಗುವ ಮನಸ್ಸು ಮಾಡುವುದಿಲ್ಲ.

ಸರ್ಕಾರಕ್ಕೆ ಸಲಹೆಗಳನ್ನು, ತಿದ್ದುಪಡಿಗಳನ್ನು ಕಳುಹಿಸಿರುವ ಮಹಿಳಾ ಸಂಘಟನೆಗಳಿಗೆ, ದಶಕಗಳ ಮಹಿಳಾ ಸಂಘಟನೆಯ ಅನುಭವವಿದೆ. ಅವರು Protection Orders ಯನ್ನು ಕೇಳುತ್ತಿದ್ದಾರೆ. ಗಂಡನ ಮನೆಯಲ್ಲಿ ಕಾನೂನುಬದ್ಧವಾಗಿ ವಾಸಮಾಡುವ ಅಧಿಕಾರವನ್ನು ಹೆಣ್ಣಿಗೆ ಕೊಡಬೇಕೆಂಬುದೇ ಈ ಪ್ರಯತ್ನದ ಹಿಂದಿನ ಆಶಯವಾಗಿದೆ. ಅವಳಿಗೆ ಮತ್ತು ಅವಳ ಮಕ್ಕಳಿಗೆ ತುರ್ತು ಅವಶ್ಯಕತೆಗೆ ಹಣದ ಸಹಾಯವನ್ನೂ ನೀಡಬೇಕೆಂದು ಈ ತಿದ್ದುಪಡಿ ಒತ್ತಾಯಿಸುತ್ತದೆ.

ಸರ್ಕಾರದ ಕರಡು ಮಸೂದೆಯಲ್ಲಿ ಕೆಲವು ಅತ್ಯಂತ ಆಕ್ಷೇಪಣಾರ್ಹ ಅಂಶಗಳಿವೆ. ಉದಾಹರಣೆಗೆ, "ತನ್ನ ರಕ್ಷಣೆಗಾಗಿ ಮತ್ತು ಕುಟುಂಬದ ಇತರರ ಆಸ್ತಿಯ ರಕ್ಷಣೆಗಾಗಿ ಗಂಡ ಹೆಂಡತಿಯನ್ನು ದಂಡಿಸಬಹುದಾಗಿದೆ" ಎಂಬರ್ಥ ಬರುವ ಸಾಲುಗಳಿವೆ. ಅಂದರೆ ಹೆಂಡತಿಯನ್ನು ಯಾವುದೇ ಕಾರಣಕ್ಕಾಗಿ ಗಂಡ ಹೊಡೆದರೂ ಅದನ್ನು ತನ್ನ ಆಸ್ತಿಯ ರಕ್ಷಣೆಗಾಗಿ ಮಾಡಿದ ಕೃತ್ಯ ಎಂದು ಸಮರ್ಥಿಸಿಕೊಳ್ಳಬಹುದು.

ಈ ಕರಡು ಮಸೂದೆಯಲ್ಲಿ 'ಕೌಟುಂಬಿಕ ದೌರ್ಜನ್ಯ'ವನ್ನು ಕುರಿತಂತೆ ಮಾಡಲಾಗಿರುವ ವ್ಯಾಖ್ಯಾನವೇ ಸೂಕ್ತವಾಗಿಲ್ಲ. ಇಂದು ಅಂತರರಾಷ್ಟ್ರೀಯವಾಗಿ ಅಂಗೀಕೃತವಾದ ಹಲವಾರು ವ್ಯಾಖ್ಯಾನಗಳು ಸಿಗುತ್ತವೆ. ಇವುಗಳಲ್ಲಿ ಯಾವುದನ್ನಾದರೂ ಬಳಸಿಕೊಳ್ಳಬಹುದಾಗಿತ್ತು. ಕೌಟುಂಬಿಕ ಹಿಂಸೆಯ ಹಲವಾರು ಆಯಾಮಗಳನ್ನು ಈ ವ್ಯಾಖ್ಯಾನ ಒಳಗೊಳ್ಳುವಂತೆ ರಚಿಸಬಹುದಿತ್ತು.

ಕುಟುಂಬದಲ್ಲಿನ ಹಿಂಸೆಯನ್ನು ಕುರಿತು ಬಹಿರಂಗವಾಗಿ, ಚರ್ಚಿಸುವುದೇ ಒಂದು ರೀತಿಯಲ್ಲಿ ಅವಮಾನದ ಸಂಗತಿಯಾಗಿದೆ. ಇದು ಕೇವಲ ಖಾಸಗಿ ವಿಷಯವಲ್ಲ. ಸಾಮಾಜಿಕ ಸ್ವರೂಪ ಪಡೆದಂತಹ ವಿಷಯ. ಇದರಲ್ಲಿ ಹಿಂಸೆಗೆ ಒಳಗಾಗುವ ಮಹಿಳೆಯರು ಮಾತ್ರ ತೊಂದರೆಗೊಳಗಾಗುವುದಲ್ಲ. ಅವರೊಂದಿಗೆ ಈ ಹಿಂಸೆಗೆ ಪ್ರತ್ಯಕ್ಷ ದರ್ಶಿಗಳಾದ ಮಕ್ಕಳೂ ಸೇರಿರುತ್ತಾರೆ. ಕುಟುಂಬದ ಚೌಕಟ್ಟಿನೊಳಗೆ ಇಂತಹ ಹಿಂಸೆಯನ್ನು ಆಗು ಮಾಡಲು



*ಪುಟ 17ಕ್ಕೆ....*

# ಹೋರಾಟಗಾರ್ತಿಯ ಆತ್ಮವೃತ್ತಾಂತ




**ಬದುಕು ಬಂದೀಖಾನೆ** : ಲೇಖಕಿ ನೀಲಾ ಕೆ.
**ಪ್ರಕಾಶಕರು** : ಅಖಿಲಭಾರತ ಜನವಾದಿ ಮಹಿಳಾ ಸಂಘಟನೆ, ಕರ್ನಾಟಕ ರಾಜ್ಯ ಸಮಿತಿ,
*ವರ್ಷ : 2001,* *ಬೆಲೆ : ರೂ. 45/-*

ಕನ್ನಡದಲ್ಲಿ ಲೇಖಕಿಯರ ಆತ್ಮಚರಿತ್ರೆ, ಆತ್ಮವೃತ್ತಾಂತಗಳು ಕೆಲವಾದರೂ ಸಿಗುತ್ತವಾದರೂ ಸಮಾಜ ಕಾರ್ಯಕರ್ತೆಯರ ಆತ್ಮವೃತ್ತಾಂತಗಳು ಅಪರೂಪ. ಇಂತಹ ಸನ್ನಿವೇಶದಲ್ಲಿ ಮಹಿಳಾ ಕಾರ್ಯಕರ್ತೆ, ಸಂಘಟಕಿ ಕೆ. ನೀಲಾರವರ ಬದುಕು ಬಂದೀಖಾನೆ ಒಂದು ಅಪರೂಪದ ಅನುಭವವನ್ನು ದಾಖಲು ಮಾಡುತ್ತದೆ.

ಜಾಗತೀಕರಣದ ಭೂತವು ವಿವಿಧ ಮುಖಗಳಲ್ಲಿ ನಮ್ಮ ದೇಶದ ಜನಜೀವನವನ್ನು ಆವರಿಸಿ ಬದುಕನ್ನು ಆತಂಕಗೊಳಿಸಿರುವಾಗ ಅದರ ವಿರುದ್ಧದ ಹೋರಾಟದಲ್ಲಿ ಲೇಖಕಿ ನೀಲಾರವರು ಪಡೆದ ಅನುಭವ ಈ ಕೃತಿಯ ಮೂಲದ್ರವ್ಯ.

'ತೊಗರಿ'ಯ ಕಣಜವೆಂದೇ ಪ್ರಖ್ಯಾತವಾದ ಗುಲಬರ್ಗಾದ ಜೀವನ ಉಸಿರು ಅಲ್ಲಿನ ಕೃಷಿಕ ಸಮುದಾಯ. ಸುಮಾರು 7 ಲಕ್ಷ ಎಕರೆಯಲ್ಲಿ ತೊಗರಿ ಬೆಳೆಯುವ ಈ ಜಿಲ್ಲೆಯ ರೈತರ ಜೀವನ ಇತ್ತೀಚಿನ ದಿನಗಳಲ್ಲಿ ಬರಡಾದದಷ್ಟೇ ಜೀವಕಳೆದುಕೊಳ್ಳುವಂತಹ ಸ್ಥಿತಿಗೆ ದೂಡಿದೆ. ಜಾಗತೀಕರಣದ ಪರಿಣಾಮವಾಗಿ ಸಹಜವಾಗಿಯೇ ರೈತನು ಬಳಸುವ ಗೊಬ್ಬರ, ಬೀಜ, ಕೀಟನಾಶಕ - ಹೀಗೆ ಎಲ್ಲದರ ಮೇಲಿನ ಸಬ್ಸಿಡಿಯನ್ನು ಸರಕಾರ ಕಡಿತಮಾಡಿದೆ. ಮತ್ತೆ ಬೆಲೆ ದುಬಾರಿ ಮಾಡಿದೆ. ಇಷ್ಟು ಸಾಲದೆಂಬಂತೆ ಕಳಪೆಗೊಬ್ಬರದ ಜಾಲಗಳು ಹುಟ್ಟಿಕೊಂಡು ರೈತರ ಬದುಕನ್ನು ಕಣ್ಣೀರಿನಲ್ಲಿ ಅದ್ದಿವೆ. ಈ ಎಲ್ಲದರ ವಿರುದ್ಧ ರೈತರ ಹೋರಾಟ ಸಾಗಿದೆ. ಈ ಹೋರಾಟದಲ್ಲಿ ಜಿಲ್ಲೆಯ ರೈತ ಸಂಘ, ಮಹಿಳಾ ಸಂಘಗಳು ಮುಂಚೂಣಿಯಲ್ಲಿವೆ. ತೊಗರಿಗೆ ಬೆಂಬಲ ಬೆಲೆಗೆ ಒತ್ತಾಯಿಸಿ, ಅದರೊಂದಿಗೆ ಸರಕಾರದ ತೊಗರಿಯ ಆಮದು ನೀತಿಯನ್ನು ವಿರೋಧಿಸಿ ರೈತರು ಹೋರಾಟದಲ್ಲಿ ತೊಡಗಿದ್ದರು. ಇವರಲ್ಲಿ ಸಾವಿರಾರು ಮಹಿಳೆಯರು ರಾಸ್ತಾ ರೋಕೋ, ಮೆರವಣಿಗೆ, ಸಭೆ ಮುಂತಾದ ವಿವಿಧ ಮಾರ್ಗಗಳ ಮೂಲಕ ಚಳುವಳಿಯಲ್ಲಿ ಭಾಗವಹಿಸಿದ್ದರು. ಮೂರು ದಿನಗಳ ಕಾಲ ರಾಜ್ಯಾದ್ಯಂತ ಕೇಂದ್ರ ಸರ್ಕಾರದ ಜನವಿರೋಧಿ ನೀತಿ, ಖಾಸಗೀಕರಣ, ಉದಾರೀಕರಣ ಮತ್ತು ಜಾಗತೀಕರಣ ನೀತಿಗಳನ್ನು ವಿರೋಧಿಸಿ ರಾಸ್ತಾ ರೋಕೋ ಆಂದೋಲನಕ್ಕೆ ಕರೆ ಕೊಡಲಾಯಿತು. ಈ ಚಳುವಳಿಯನ್ನು ಹತ್ತಿಕ್ಕಲು ಹೊರಟ ಪೋಲೀಸ್ ಯಂತ್ರ ಚಳುವಳಿಯಲ್ಲಿ ತೊಡಗಿದ್ದವರ ಮೇಲೆ ಲಾಠೀ ಬೀಸಿ ಮರಣಾಂತಿಕ ಧಾಳಿ ಮಾಡಿದರು. ಪೆಟ್ಟು ತಿಂದವರನ್ನು ದವಾಖಾನೆಗೆ ಬೇಡಿ ಹಾಕಿ ಕರೆದುಕೊಂಡು ಹೋಗಿದ್ದರು. ಹಾಗೆ ಪೆಟ್ಟು ತಿಂದ ಸಂಗಾತಿಗಳನ್ನು ವಿಚಾರಿಸಿಕೊಂಡು ಹೋಗಲು ಬಂದ ನಾಯಕರುಗಳನ್ನು ಮತ್ತೆ ಹೊಡೆದು ಬಂಧಿಸಲಾಯಿತು. ಹಾಗೆ ಬಂಧಿಯಾದವರಲ್ಲಿ ಕೆ. ನೀಲಾ ಕೂಡ ಒಬ್ಬರು. ಒಂಬತ್ತು ದಿನಗಳ ಕಾಲ ಗುಲಬರ್ಗಾದ ಜೈಲಿನಲ್ಲಿ ಬಂಧಿಯಾಗಿದ್ದಾಗಿನ ಅನುಭವದ ಗಾಥೆ ಈ ಕಿರುಹೊತ್ತಿಗೆ.

ಹೋರಾಟಗಾರ್ತಿ ನೀಲಾ ಜೈಲಿನಲ್ಲಿ ಕಳೆದ ದಿನಗಳಲ್ಲಿ ಅಲ್ಲಿ ಭೇಟಿಮಾಡಿದ ಮಹಿಳಾ ಖೈದಿಗಳ ಅನುಭವವನ್ನು ಕತೆಯಾಗಿ ನಮ್ಮ ಮುಂದೆ ಬಿಚ್ಚಿಡುತ್ತಾರೆ. ಆದ್ದರಿಂದ ಈ ಕೃತಿ ನೀಲಾರ ಕತೆ ಮಾತ್ರವಾಗದೆ ಮಹಿಳಾ ಸಮುದಾಯದ ಹಲವಾರು ನೋವು ನಲಿವುಗಳ ಕತೆಯಾಗುತ್ತದೆ. ''ಜೈಲಿಗೆ ಬರುವುದಕ್ಕೆ ಮೊದಲು ನಮಗೆಲ್ಲ ಗೊತ್ತಾಗುತ್ತಿದ್ದು ಒಂದು ಮಗ್ಗುಲಿನ ಸಮಸ್ಯೆಗಳು ಮಾತ್ರ. ಆದರೆ ಈ ಜೈಲಿಗೆ ಬಂದ ಮೇಲೆ ಎಲ್ಲ ಮಗ್ಗುಲುಗಳೂ ತೆರೆದುಕೊಳ್ಳತೊಡಗಿವೆ. ನಾವು ಕೆದಕುತ್ತ ಹೋದಷ್ಟೂ ಈ ವ್ಯವಸ್ಥೆ ತೆರೆದುಕೊಳ್ಳುತ್ತ ಹೋಗುತ್ತಿದೆ.'' ಎನ್ನುವ ನೀಲಾ ಜೈಲಿನ ಅನುಭವವನ್ನು ವೈಯಕ್ತಿಕ ನೆಲೆಯಲ್ಲಿ ಮತ್ತು ಸಾಮಾಜಿಕ ನೆಲೆಯಲ್ಲಿ ಅರ್ಥೈಸುವ ಪ್ರಯತ್ನ ಮಾಡುತ್ತಾರೆ.

ಇಲ್ಲಿ ಚಳುವಳಿಯೊಂದರ ಹುಟ್ಟಿಗೆ ಕಾರಣವಾಗುವ ಸಮಸ್ಯೆಗಳ ವಿಶ್ಲೇಷಣೆಯಿಂದ ಹೆಣ್ಣಿನ ನೋವು ಸಮಸ್ಯೆಗಳಾಗಿ ಸಂಕೀರ್ಣಸ್ವರೂಪ ಪಡೆಯುವುದರೊಂದಿಗೆ ಅವರನ್ನು ಖೈದಿಗಳನ್ನಾಗಿ ಮಾಡುವ ಹಂತದವರೆಗಿನ ವಿವರಣೆ ಇದೆ. ತೊಗರಿಬೆಳೆಯ ಬೆಲೆನಾಶದಿಂದ ಮುರಿದ ಮದುವೆಗಳು, ಆತ್ಮಹತ್ಯೆಯಲ್ಲಿ ಕೊನೆಗೊಂಡ ಜೀವಗಳು ಒಂದೆಡೆಯಾದರೆ,

ಬಡತನದ ಬೇಗೆಗೆ ವರದಕ್ಷಿಣೆಯನ್ನು ಪರಿಹಾರವಾಗಿ ಕಂಡ ಕುಟುಂಬಗಳು ಹೇಗೆ ನರಕಗಳಾಗುತ್ತವೆ, ಎನ್ನುವುದರ ಕತೆ ಇಲ್ಲಿದೆ.

ಬಂದೀಖಾನೆಯೊಳಗೆ ಬಂಧಿಯಾಗಿ ಕುಳಿತ ನೀಲಾಗೆ ಭಗತ್‌ಸಿಂಗನ ವೀರೋಚಿತ ಬದುಕು ಕಣ್ಮುಂದೆ ಬರುತ್ತದೆ. ಚಳುವಳಿಯಿಂದ ಜೈಲಿಗೆ ಸೇರಿದ ಹೋರಾಟಗಾರರ ತಂಡವನ್ನೇ ಕಣ್ಮುಂದೆ ತರಿಸಿಕೊಂಡು ಜೈಲಿನ ಅನುಭವವನ್ನು ತತ್ವಜ್ಞಾನಿಯ ಶೈಲಿಯಲ್ಲಿ ಚಿಂತಿಸಲು ಪ್ರಾರಂಭಿಸುತ್ತಾರೆ. ಆದ್ದರಿಂದಲೇ ಅಲ್ಲಿ ಅವರಿಗೆ ಬದುಕು ಸಹನೀಯವಾಗುತ್ತದೆ.

ಒಂದು ಸಾಮಾಜಿಕ ವ್ಯವಸ್ಥೆಯನ್ನು ಬದಲು ಮಾಡಲು ಹೋರಾಟ ಮತ್ತು ಅಂತಹ ಬದಲಾವಣೆಯಲ್ಲಿ ನಂಬಿಕೆಯಿಟ್ಟಿರುವ ನೀಲಾರಂತಹವರಿಗೆ ಇಲ್ಲಿನ ಜೈಲಿನ ವ್ಯವಸ್ಥೆಯೇ ಸಮಾಜದ ಒಂದು ತುಣುಕಾಗಿ ಕಾಣುತ್ತದೆ. ಅಲ್ಲಿನ ವಿಶೇಷವಾಗಿ ಮಹಿಳೆಯರ ಸಮಸ್ಯೆಗಳನ್ನು ಇಡೀ ಸಮಾಜದ ಸಮಸ್ಯೆಗಳಾಗಿ ಕಾಣಬಲ್ಲ ಮನಸ್ಸು ಈ ಕೃತಿಯುದ್ದಕ್ಕೂ ಕಂಡುಬರುತ್ತದೆ.

ಜೈಲಿನ ಜೀವನದ ಒಂದು ಸ್ಥೂಲ ಪರಿಚಯ ಮಾಡುವ ನೀಲಾ ಅವರು ವ್ಯಂಗ್ಯವಾಗಿ ಹೇಳುವ ಮಾತುಗಳಲ್ಲಿ ಗಟ್ಟಿ ವಾಸ್ತವತೆಯನ್ನು ಕಾಣಬಹುದು. ''ಹಸಿವಾದೊಡೆ ಅನ್ನ ಕೊಡುವವರುಂಟು (ಅದು ಕಳಪೆಯೇ ಇರಬಹುದು). ತೃಷೆಯಾದೊಡೆ ಊರಿಗೆಲ್ಲ ಕಾಮಾಲೆ ತರುವ ಭೀಮೆಯ ನೀರುಂಟು. ಶಯನಕೆ ಸರಳುಗಳ ಕತ್ತಲೆ ಕೋಣೆಯುಂಟು. ಮತ್ತೇನು ಬೇಕು? ಮನಸ್ಸನ್ನು ಇನ್ನಷ್ಟು ಗಟ್ಟಿಗೊಳಿಸಲು ಸ್ವಾತಂತ್ರ್ಯಚಳುವಳಿಯಲ್ಲಿ ಜೇಲು ಸೇರಿದವರ ನೆನಪುಗಳು... ಹೋರಾಟದ ಕಿಚ್ಚನ್ನು ನಂದಿಸಬೇಕೆಂಬ ಸರಕಾರಕ್ಕೆ ಈ ದೇಶದ ವೀರಗಾಥೆಗಳೇ ಸವಾಲುಗಳು... ಪ್ರಪಂಚದಲ್ಲಿ ಜನತೆಯ ಹೋರಾಟಗಳು ಪ್ರಖರವಾಗಿ ಅರಳಿದ್ದು ಜೈಲುಗಳಲ್ಲಿಯೇ,'' ಎಂದು ಹೆಮ್ಮೆಯಿಂದ ಹೇಳುವ ನೀಲಾರವರು ಜೈಲು ಸೇರಿದ್ದು ಹೋರಾಟದ ಕಾರಣದಿಂದ. ಆದರೆ ಜೈಲಿನಲ್ಲಿರುವ ಉಳಿದವರು ನೋವಿನ ಮೂಟೆಗಳನ್ನು ತಮ್ಮಲ್ಲಿ ಕಟ್ಟಿಕೊಂಡು ಅಪಮಾನ, ನೋವು, ಕೀಳರಿಮೆ, ಸಂತಾಪ, ಅಳುಕು, ಖೇದದ ಮೊಟ್ಟೆಗಳಾಗಿ ಬದುಕಿನ ಬಂದೀಖಾನೆಯಿಂದ ಈ ಕಾನೂನಿನ ಬಂದೀಖಾನೆಗೆ ಬಂದವರು.

ಮಗುವಿನ ಮೇಲೆ ಮಗ ಅತ್ಯಾಚಾರ ಮಾಡಿದ್ದಕ್ಕೆ ಸಾಕ್ಷಿಯಾಗಿ ಬಂದವರಿದ್ದಾರೆ, ಸೊಸೆಗೆ ಬೆಂಕಿ ಹಚ್ಚಿಯೋ ಅಥವಾ ಹಚ್ಚಿದ ಆರೋಪ ಹೊತ್ತಿಯೋ ಖೈದಿಗಳಾದವರು, ಬಡತನದ ಬೇಗೆ ತಾಳಲಾರದೆ, ಗಂಡನ ದೌರ್ಜನ್ಯಕ್ಕೆ ರೋಸಿ ಮಕ್ಕಳಿಗೆ ವಿಷವಿಟ್ಟು, ತಾವು ಸಾಯಲು ವಿಫಲರಾಗಿ ಜೈಲು ಸೇರಿದವರಿದ್ದಾರೆ. ಹೀಗೆ ಹತ್ತುಹಲವು ಕೌಟುಂಬಿಕ ಕಾರಣಗಳು ಹೆಣ್ಣಿನ ಬದುಕನ್ನು ಹೈರಾಣವಾಗಿಸುವುದನ್ನು ನೀಲಾ ಚಿತ್ರಿಸುತ್ತಲೇ ಸಾಮಾಜಿಕ ಸಮಸ್ಯೆಗಳ ಮೂಲವನ್ನು ಶೋಧಿಸುತ್ತಾರೆ. ಮಾಧ್ಯಮಗಳಿಂದ ಉತ್ತೇಜಿತರಾಗಿ ಲೈಂಗಿಕ ದೌರ್ಜನಕ್ಕೆ ತೊಡಗುವ ಪುರುಷ ಸಮೂಹ, ಹಣದ ಆಸೆಗಾಗಿ ಹೆಂಡತಿಯನ್ನು ಹಿಂಸಿಸುವ ಗಂಡ, ಒಂದು ಕಡೆ ನಮ್ಮ ಕೊಳಕು ಸಮಾಜದ ಪ್ರತಿನಿಧಿಗಳಾದರೆ ವರದಕ್ಷಿಣೆ ತಾರದ, ಕುಟುಂಬದಲ್ಲಿ ಹೊಂದಾಣಿಕೆ ಮಾಡಿಕೊಳ್ಳದ ಸೊಸೆ, ನಾದಿನಿಯರನ್ನು ಹಿಡಿದು ಶಿಕ್ಷಿಸಿ, ಕೊಲ್ಲುವ ಮಹಿಳೆಯರು ಸಮಸ್ಯೆಯ ಇನ್ನೊಂದು ತುದಿಯಲ್ಲಿದ್ದಾರೆ. ಕೆಲವೊಮ್ಮೆ ತಮ್ಮ ಸ್ವಾರ್ಥಕ್ಕಾಗಿ ಕಾನೂನನ್ನು ದುರುಪಯೋಗ ಪಡಿಸಿಕೊಳ್ಳಬಲ್ಲ ಶಕ್ತಿಗಳಿಂದ ಸುಳ್ಳು ಆಪಾದನೆ ಹೊತ್ತು ಜೈಲಿಗೆ ಸೇರಬೇಕಾದ ಸಂದರ್ಭಗಳು ಇರಬಹುದಾದ ಸಾಧ್ಯತೆಯನ್ನು ಇವರು ತಳ್ಳಿಹಾಕುವುದಿಲ್ಲ.

ಈ ಕಿರು ಪುಸ್ತಕದಲ್ಲಿ ಹೋರಾಟಗಾರ್ತಿ ನೀಲಾ ತಮ್ಮ ಹೋರಾಟದ ಬದುಕಿನ ಬುತ್ತಿಯನ್ನು ಬಿಚ್ಚಿ ಓದುಗರೊಂದಿಗೆ ಹಂಚಿಕೊಂಡಿದ್ದಾರೆ. ಚಳುವಳಿಯ ಹಣತೆಯನ್ನು ಹಚ್ಚಿ ಕತ್ತಲ ಬಂದಿಖಾನೆಯ ಮೇಲೆ ಬೆಳಕು ಬೀರಿದ್ದಾರೆ. ಈ ಕೃತಿಗೆ ಇರುವ ವಿಶೇಷವೆಂದರೆ ಇದು ನೀಲಾರೊಬ್ಬರ ಆತ್ಮವೃತ್ತಾಂತ ಆಗಿ ಮಾತ್ರ ಉಳಿಯದೆ ಹೋರಾಟಗಾರ್ತಿಯರೆಲ್ಲರ ಆತ್ಮ ವೃತ್ತಾಂತವೂ ಆಗಿದೆ.

**- ಅಚಲ**

★ ★ ★

***ಪುಟ 15ರಿಂದ....***

ಸಮಾಜವು ಒಪ್ಪಿಕೊಂಡರೆ ನಾಲ್ಕು ಗೋಡೆಗಳಾಚೆ ನಡೆಯಬಹುದಾದ ಹಿಂಸೆಯನ್ನು ತಡೆಗಟ್ಟುವುದಾದರೂ ಹೇಗೆ? ಆದ್ದರಿಂದಲೇ ಬಹುಷಃ ನಾವು ಬೀದಿಗಳಲ್ಲಿ ನಡೆಯುವ ಹಿಂಸೆ, ಮತ್ತು ದೌರ್ಜನ್ಯಗಳನ್ನು ಸುಮ್ಮನೆ ಒಪ್ಪಿಕೊಂಡು ಬಿಡುತ್ತೇವೇನೋ ಎಂದೆನಿಸುತ್ತದೆ.

ಕುಟುಂಬದೊಳಗಿನ ಮತ್ತು ಹೊರಗಿನ ಹಿಂಸೆಗೆ ಇತ್ತೀಚಿನ ಒಂದು ಉದಾಹರಣೆಯನ್ನು ನೀಡಬಹುದು. ಕಳೆದ ತಿಂಗಳು ಗುಜರಾತಿನಲ್ಲಿ ಹತ್ಯಾಕಾಂಡವು ತುತ್ತತುದಿಯನ್ನು ಮುಟ್ಟಿದ್ದ ಸಮಯ. ಪತ್ರಿಕೆಯ ವರದಿಯ ಪ್ರಕಾರ ಒಬ್ಬ ಹಿಂದೂ ಮಹಿಳೆ ತನ್ನ ಗಂಡ ಮನೆಯಿಂದ ಹೊರಗೆ ಹೋಗಿ ದೊಂಬಿ ನಡೆಸುತ್ತಿದ್ದ ಗುಂಪನ್ನು ಸೇರದಂತೆ ತಡೆದಳು. ಅವಳ ಕೋರಿಕೆಯನ್ನು ಮನ್ನಿಸದ ಗಂಡ ಹೊರಗೆ ಹೋದದ್ದಷ್ಟೇ ಅಲ್ಲ, ನಂತರ ಮನೆಗೆ ಬಂದು ತನ್ನ ನಂಟರನ್ನು ಸೇರಿಸಿಕೊಂಡು ಹೆಂಡತಿಯನ್ನು ದನ ಬಡಿಯುವಂತೆ ಬಡಿದ. ಅವಳ ಮೇಲೆ ಸೀಮೆ ಎಣ್ಣೆ ಸುರಿದು ಹಚ್ಚಿದ. ಅವನ ದುರದೃಷ್ಟವೇನೋ ಸತ್ತೇ ಹೋಗಬೇಕಿದ್ದ ಅವಳು ಬದುಕುಳಿದು ಈ ಕಥೆಯನ್ನು ವರದಿ ಮಾಡಿದಳು.

**- ದಿ ಹಿಂದೂ ಕೃಪೆ**

# ಇಲ್ಲಿ ಸಲ್ಲದವರು ಎಲ್ಲಿ ಸಲ್ಲುವರಯ್ಯ.....?

ನದಿಯು ವರ್ಷ ವರ್ಷ ತನ್ನ ಪಾತ್ರವನ್ನು ಬದಲಿಸುತ್ತ ಸಾಗುತ್ತದಂತೆ. ಪಾತ್ರ ಬದಲಿಸುತ್ತ ಜನಜೀವನವನ್ನೇ ಬದಲಿಸುತ್ತದೆ. ಶಹನಾಜಳ ಜೀವನವನ್ನೂ ಒಂದು ನದಿ ಹೀಗೆಯೇ ಬದಲಾಯಿಸಿತು. ಎಲ್ಲಿಂದೆಲ್ಲಿಗೋ ಸೆಳೆದೊಯ್ಯಿತು.

ಏಳು ವರ್ಷಗಳ ಹಿಂದೆ ಶಹನಾಜ್ ಪಾಕಿಸ್ತಾನದಲ್ಲಿದ್ದಳು. ಆಗಿನ್ನು ಅವಳು ನಯೀನವೇಲಿ ದುಲ್ಹನ್, ಅರ್ಥಾತ್ ನವವಧು. ತಾಯ ಮನೆ ಬಿಡುವ ದುಗುಡ - ದುಮ್ಮನಗಳೊಂದಿಗೆ ವೈವಾಹಿಕ ಜೀವನದ ಹೊಂಗನಸುಗಳನ್ನು ಕಟ್ಟಿಕೊಂಡು ಗಂಡನ ಮನೆ ಹೊಕ್ಕ ಶಹನಾಜ್‌ಳಿಗೆ ಭ್ರಮ ನಿರಾಸನವಾಯಿತು. ಏನೋ ಕಿತಾಪತಿ - ಕಿರಿಕಿರಿಗಳು ಅವಳನ್ನು ಕಾಡಿದವು ; ಮನೆಯಿಂದ ಹೊರಹಾಕಿದವು. ಮನೆಯಿಂದ ಹೊರಬಂದ ಶಹನಾಜಳ ಬಳಿ ದುಃಖ ಸಂಕಟ, ಒಂದಿಷ್ಟು ಕೋಪ ತಾಪಗಳ ಹೊರತಾಗಿ ಇನ್ನೇನೂ ಇರಲಿಲ್ಲ. ಗುರಿಯೇನೋ ಇತ್ತು. ಆದರೆ ಅದು ಎಲ್ಲಾದರೂ ಬಿದ್ದು ಪ್ರಾಣ ಕಳೆದು ಕೊಳ್ಳಬೇಕೆಂಬ ಗುರಿಯಷ್ಟೇ ಆಗಿತ್ತು. ಅದಕ್ಕೆ ತಕ್ಕಂತೆ ಅವಳಿಗೆ ಒಂದು ನದಿಯೂ ಎದುರಾಗಿ ಸಿಕ್ಕಿತು. ಉಕ್ಕಿ ಹರಿಯುತ್ತಿದ್ದ ನದಿ ಅವಳಿಗೆ ಆಹ್ವಾನವನ್ನೂ ಕೊಟ್ಟಿತು. ನೆಗೆದು ಹೋಗಲಿ ಪ್ರಾಣ ಎನ್ನುತ್ತಾ ಶಹನಾಜ್ ನೆಗೆದೇ ಬಿಟ್ಟಳು. ಆದರೆ ನದಿಯೂ ಅವಳಿಗೆ ನೆಮ್ಮದಿ ಕೊಡಲಿಲ್ಲ; ಅವಳನ್ನೂ ಒಂದು ದಂಡೆಯ ಮೇಲೆ ಒಗೆದು ರಭಸದಿಂದ ತನ್ನ ಪಾಡಿಗೆ ತಾನು ಸಾಗಿತು. ಕಷ್ಟಗಳ ಸರಮಾಲೆ ಒಂದಕ್ಕೊಂದು ಬೆಸೆದು ಕೊಳ್ಳುತ್ತಲೇ ಇತ್ತು. ಅವಳು ಬಿದ್ದಿದ್ದ ದಂಡೆ ಭಾರತದ ಗಡಿಯಲ್ಲಿತ್ತು. ಗಡಿಪಡೆಯವರು ಅವಳನ್ನು ಉಪಚರಿಸಿ, ವಿಚಾರಿಸಿ ಪೋಲೀಸರ ವಶಕ್ಕೊಪ್ಪಿಸಿದರು. ವೀಸಾ ಇಲ್ಲ! ಪಾಸ್‌ಪೋರ್ಟ್ ಮೊದಲೇ ಇಲ್ಲ!! ಜೈಲುವಾಸಕ್ಕೆ ಈ ಆಪಾದನೆಯೇ ಸಾಕಾಯಿತು. ಪೂಂಛ್ ಜಿಲ್ಲೆಯ ಜೈಲಿನಲ್ಲಿ ಒಂದು ವರ್ಷ ಸೆರೆಮನೆವಾಸ. ಈ ಅವಧಿಯಲ್ಲೇ ಅವಳು ಗರ್ಭಿಣಿಯಾದಳು. ವಿಚಾರಣೆ ನಡೆಸಿದಾಗ ಪೋಲೀಸ್ ಪೇದೆಯೊಬ್ಬ ಜೈಲಿನಲ್ಲಿ ಅವಳ ಮೇಲೆ ಅತ್ಯಾಚಾರವೆಸಗಿದ್ದು ಬೆಳಕಿಗೆ ಬಂದಿತು. ಆ ಪೇದೆಯ ಮೇಲೆ ಮೊಕದ್ದಮೆಯನ್ನು ಹೂಡಲಾಯಿತು. ಆತ ಇನ್ನೂ ಅಮಾನತ್ತಿನಲ್ಲಿದ್ದಾನೆ.

ಶಹನಾಜ್ ಒಂದು ವರ್ಷವನ್ನು ಸೆರೆಯಲ್ಲಿ ಕಳೆದಳು. ಒಂದು ಹೆಣ್ಣುಮಗುವೂ ಅಲ್ಲೇ ಹುಟ್ಟಿತಲ್ಲ! ಅದನ್ನು ಮೊಬಿನ್ ಎಂದು ಕರೆದಳು. ಶಹನಾಜ್ - ಮೊಬಿನ್ ಪ್ರಕರಣವನ್ನೂ ವಿಶೇಷ ಪ್ರಕರಣವೆಂದು ಪರಿಗಣಿಸಿ ಅವರನ್ನು ರಾಜೋರಿಯಲ್ಲಿರುವ ನಾರೀ ನಿಕೇತನಕ್ಕೆ 1977ರ ಜನವರಿ 8ರಂದು ಕಳುಹಿಸಲಾಯಿತು. ಅಲ್ಲಿಯೂ ಎರಡೂವರೆ ವರ್ಷ ಇರಿಸಿಕೊಂಡ ಮೇಲೆ ಜಮ್ಮುವಿನ ಸೆಂಟ್ರಲ್ ಜೈಲಿಗೆ ಕಳುಹಿಸಲಾಯಿತು. ಯಾವ ಅಪರಾಧದ ಹೊಣೆಯೂ ಇಲ್ಲದ ಕಾರಣ ಅವರನ್ನು ಜೈಲಿನಲ್ಲಿರಿಸಿಕೊಳ್ಳುವುದೇ ಜೈಲಿನ ಅಧಿಕಾರಿಗಳಿಗೆ ಮುಜುಗರ. ಹಾಗೆ ಇರಿಸಿಕೊಳ್ಳುವುದಕ್ಕೂ ತಕ್ಕ ಆದೇಶಗಳು ಬರಬೇಕಲ್ಲ! ಒಟ್ಟಿನಲ್ಲಿ ಸಾರ್ವಜನಿಕ ಸುರಕ್ಷತಾ ಕಾಯಿದೆಯ ಅನ್ವಯ ಅವರಿಬ್ಬರೂ ಜಮ್ಮುವಿನ ಜೈಲಿನಲ್ಲಿದ್ದಾರೆ.

ಇತ್ತ ಅವರನ್ನು ಪಾಕಿಸ್ತಾನಕ್ಕೆ ಕಳುಹಿಸುವ ಯತ್ನಗಳು ನಡೆದಿಲ್ಲವೆಂದೇನಿಲ್ಲ. ಇದಕ್ಕೆ ಸಂಬಂಧಿಸಿದಂತೆ ಮಾತುಕತೆಗಳು ನಡೆದೂ ನಡೆದು, ತಾಯಿ ಮಗಳಿಬ್ಬರನ್ನು ಗಡಿಯ ಬಳಿಗೆ ಕರೆದೊಯ್ಯಲಾಯಿತು. ಶಹನಾಜ್‌ಗೇನೋ ಪಾಕಿಸ್ತಾನಕ್ಕೆ ಹೋಗಲು ಸ್ವಾಗತವಿದೆ. ಆದರೆ ಇಲ್ಲಿಯೇ ಹುಟ್ಟಿದ ಕೂಸು ಮೊಬಿನ್‌ಳಿಗೆ ಅಲ್ಲಿ ಸ್ವಾಗತವಿಲ್ಲ. 'ಇವಳನ್ನು ಬಿಟ್ಟು ನಾನು ಹೇಗೆ ಹೋಗಲಿ' ಎನ್ನುತ್ತಾಳೆ ಶಹನಾಜ್. 'ನಾವೆಷ್ಟು ದಿನ ತಾನೆ ಇವರನ್ನು ಇಲ್ಲಿಟ್ಟುಕೊಳ್ಳುವುದು? ಮೊಬಿನ್‌ಳನ್ನು ಅವಳ ತಂದೆಗೆ ಹೇಗೆ - ಯಾವ ಧೈರ್ಯದ ಮೇಲೆ ಒಪ್ಪಿಸುವುದು. ಅವಳು ತಾಯಿಯೊಂದಿಗೆ ಇರಬೇಕು' ಎನ್ನುತ್ತಾರೆ ಭಾರತದ ಅಧಿಕಾರಿಗಳು. ಅದೂ ಸರಿಯೇ. ಈ ಮಧ್ಯೆ ಮೊಬಿನ್ ಶಹನಾಜ್ ಜೈಲೆಂಬ ಮನೆಯಲ್ಲೇ ಇದ್ದಾರೆ. ಆರು ವರ್ಷದ ಮೊಬಿನ್ ಶಾಲೆಗೂ ಹೋಗುತ್ತಾಳೆ.

ಉಗ್ರಗಾಮಿಗಳು ಗಡಿ ನುಸುಳುವಾಗ ಯಾರ ಕಣ್ಣಿಗೂ ಬೀಳರು. ಆದರೆ ಬಡಪಾಯಿಗಳ ವಿಷಯದಲ್ಲಿ...? ಮಾನವೀಯತೆ ಎನ್ನುವುದು ಕೇವಲ ಶಬ್ದಕೋಶದ ಪದ, ಅಲ್ಲವೇ?

**- ಗೀತಾ**

Kushal Jain
Proprietor

Off. : 3283460
3283464
Res. : 3355105



# BANGALORE IRON & STEEL TRADING CO.

Dealers in : Iron, Steel & Cement

# 129, "Gita Mansion", Kamakshi Palya,
Opp. Pooja Kalyana Mantapa, Magadi Main Road,
Bangalore - 560 079

# ಜಾಗತೀಕರಣ – ಒಂದು ನೋಟ

'ವಸುಧೈವ ಕುಟುಂಬಕಂ' ಎನ್ನುತ್ತದೆ ಭಾರತೀಯ ಸಂಸ್ಕೃತಿ. ಆದ್ದರಿಂದ 'ಜಾಗತೀಕರಣ' ಎನ್ನುವುದು ನಮಗೆ ಹೊಸದಲ್ಲವೆಂದು ಹೆಮ್ಮೆ ಪಟ್ಟುಕೊಳ್ಳಬಹುದು. ಇಡೀ ವಿಶ್ವವೇ ಒಂದು ಕುಟುಂಬ ಎನ್ನುವ ಭಾತೃಭಾವನೆಯನ್ನು ಇಂದು ನಾವು ಮಾತನಾಡುವ ಜಾಗತೀಕರಣ ಉಂಟು ಮಾಡಬಲ್ಲದೇ ಎಂದು ಪ್ರಶ್ನೆ ಹಾಕಿಕೊಂಡಾಗ ಉತ್ತರ ಶೂನ್ಯವಾಗುತ್ತದೆ.

ಜಾಗತೀಕರಣ ಪ್ರಕ್ರಿಯೆಯೆನ್ನುವುದು ಮೂಲತಃ ಆರ್ಥಿಕ ಸ್ವರೂಪವುಳ್ಳದ್ದು. ಭಾರತದಲ್ಲಿ ಆಂತರಿಕವಾಗಿ ಎಷ್ಟೇ ವಿರೋಧವಿದ್ದರೂ 1994ರಲ್ಲಿ ಗ್ಯಾಟ್ ಒಪ್ಪಂದಕ್ಕೆ ನಮ್ಮ ಸರ್ಕಾರ ಸಹಿ ಹಾಕಿದ ಮೇಲೆ, ಈ ಒಪ್ಪಂದ ವಾಣಿಜ್ಯ ಹಾಗೂ ವ್ಯಾಪಾರ ವಿಷಯಗಳಿಗೆ ಮಾತ್ರ ಸೀಮಿತವಾಗಿರದೆ ಸೇವಾಕಾರ್ಯಗಳು, ಬೌದ್ಧಿಕ ಆಸ್ತಿ ಹಕ್ಕುಗಳು, ವ್ಯಾಪಾರ ನೀತಿ ಪರಾಮರ್ಶೆ ಸಂದಾಯ ಶಿಲ್ಕು ಇತ್ಯಾದಿ ಎಲ್ಲ ವಿಷಯಗಳಿಗೂ 'ವಿಶ್ವವ್ಯಾಪಾರ ಸಂಘಟನೆ'ಗೆ ತಲೆ ಹಾಕುವುದಕ್ಕೆ ಅನುವು ಮಾಡಿಕೊಟ್ಟಿದ್ದೇವೆ. ಇದರ ಪರಿಣಾಮವಾಗಿ ಸಂವಿಧಾನದಲ್ಲಿ ಮಾತ್ರ ಉಳಿದಿದ್ದ ಸಮಾಜವಾದಿ ಧೋರಣೆಗಳು, ಸಾಮಾಜಿಕ ನ್ಯಾಯವಿರಬೇಕೆಂಬ ಕಾಳಜಿಗಳು ಈಗ ಕಣ್ಮರೆಯಾಗಿ ಮನುಷ್ಯನ ಅಸ್ತಿತ್ವವನ್ನು ನಿರ್ಣಯಿಸುವ ಏಕೈಕ ಪ್ರಜಾಸತ್ತಾತ್ಮಕ ಮಾರ್ಗ ಮಾರುಕಟ್ಟೆಯಾಗಿದೆ. ಇಂದು ನಾವು ಬದುಕುತ್ತಿರುವುದೇ ಮಾರುಕಟ್ಟೆ ಸಂಸ್ಕೃತಿಯಲ್ಲಿ. ಮನುಷ್ಯ - ಮನುಷ್ಯನ ಸಂಬಂಧಗಳು ಲಾಭ-ನಷ್ಟಗಳಲ್ಲಿ ಹಣದ ಮೌಲ್ಯಗಳು ಎಲ್ಲವೂ ಈ ಮಾರುಕಟ್ಟೆ ಸಂಸ್ಕೃತಿಯಲ್ಲಿ ನಿರ್ಧಾರವಾಗುತ್ತದೆ. ಬಲಾಢ್ಯ ಅಲ್ಪ ಸಂಖ್ಯಾತರ ಹಿತಕ್ಕೆಂದೇ ಇರುವ ಈ ಮಾರುಕಟ್ಟೆ ಬಹುಸಂಖ್ಯಾತರ ಜೀವನವನ್ನು ಹಿಂಡಿ ಹಿಪ್ಪೆ ಮಾಡುತ್ತದೆ. ಒಟ್ಟಿನಲ್ಲಿ Welfare State ಆಗಿದ್ದ ದೇಶ ಇಂದು ಅದರ ನಿಯಮಗಳನ್ನು ಗಾಳಿಗೆ ತೂರಿ ವಿಶ್ವವೆಂಬ ಹಳ್ಳಿಯೊಳಗೆ ತನ್ನ ನೆಲೆಯಿಲ್ಲದ ಆರ್ಥಿಕ ದಾಸ್ಯ, ಸಾಂಸ್ಕೃತಿಕ ದಾಸ್ಯಕ್ಕೆ ಸಿಕ್ಕಿ ನಾಚಿಕೆಯಿಲ್ಲದ, ಲಜ್ಜೆಗೆಟ್ಟ ಬದುಕನ್ನು ಸಾಗಿಸಬೇಕಾಗುತ್ತಿದೆ.

ಸರ್ಕಾರದ ಸ್ವಾಮ್ಯದಲ್ಲಿರುವ ಸಂಪತ್ತು ಕಂಪೆನಿಗಳನ್ನು ಖಾಸಗೀಕರಣಕ್ಕೊಳಪಡಿಸುವುದು ಜಾಗತೀಕರಣದ ಮೊದಲ ಸೂತ್ರ. ಹೀಗೆ ಖಾಸಗೀಕರನಕ್ಕೊಳಪಟ್ಟ ಉದ್ಯಮಕ್ಷೇತ್ರಗಳಲ್ಲಿ ಮಹಿಳೆ ಅಗ್ಗದ ದುಡಿಮೆಗಾರಳಾಗಿ ಪರಿವರ್ತಿತಳಾಗುತ್ತಾಳೆ. ಏಕೆಂದರೆ ತಾಂತ್ರಿಕ ನೈಪುಣ್ಯತೆಯನ್ನು ನಿರೀಕ್ಷಿಸುವ ಆಧುನೀಕೀಕರಣ ಮತ್ತು ಖಾಸಗೀಕರಣ ಪ್ರಕ್ರಿಯೆಯಲ್ಲಿ ನೈಪುಣ್ಯತೆಯಲ್ಲದೆ ಮಹಿಳೆ ಕಡಿಮೆ ಕೂಲಿ ಪಡೆಯುತ್ತಾಳೆ. ಇಲ್ಲವೆ ಕೆಲಸ ಕಳೆದುಕೊಳ್ಳುತ್ತಾಳೆ. ಚಿಕ್ಕ ಚಿಕ್ಕ ಉದ್ಯಮಗಳೆಲ್ಲಾ ಮುಚ್ಚಿ ಅಲ್ಲಿನ ಮಹಿಳೆಯರು ಬೀದಿ ಪಾಲಾಗುತ್ತಾರೆ. ದೊಡ್ಡ ಉದ್ಯಮಗಳಲ್ಲೂ ಮಹಿಳೆಯರು ಇದುವರೆಗೂ ಹೋರಾಟದಿಂದ ಪಡೆದುಕೊಂಡು ಬಂದಿರುವ ಸವಲತ್ತುಗಳು ಇಲ್ಲವಾಗಿ ಬಿಡುತ್ತವೆ. ವಿಶ್ವಬ್ಯಾಂಕಿನ ಆಣತಿಯಂತೆ ನಮ್ಮ ಉದ್ದಿಮೆಗಳ ವಹಿವಾಟುಗಳು ನಡೆಯಬೇಕಾಗುವುದರಿಂದ ಆರ್ಥಿಕ ಶಿಸ್ತನ್ನು ಕಾಪಾಡಿಕೊಳ್ಳಬೇಕು ಎಂಬ ನೆಪವೊಡ್ಡಿ, ಸಾಮಾಜಿಕ ಕಲ್ಯಾಣಕಾರಿಯೋಜನೆಗಳನ್ನು ಕಡಿತ ಮಾಡಲಾಗುವುದು.

ಇನ್ನು ಗ್ರಾಮಗಳ ಕಥೆ ಮತ್ತಷ್ಟು ಶೋಚನೀಯ. ಶೇಕಡ 70ರಷ್ಟು ಗ್ರಾಮಗಳೇ ಇರುವ ನಮ್ಮ ದೇಶದಲ್ಲಿ ಜಾಗತೀಕರಣದ ಹೊಡೆತವನ್ನು ಅಲ್ಲಿನ ರೈತರು ತಡೆದುಕೊಳ್ಳಲಾರರು. ವಿಶ್ವಬ್ಯಾಂಕಿನ ಆಣತಿಯಿಂದಾಗಿಯೇ ರೈತರಿಗೆ ಬೇಕಾದ ಗೊಬ್ಬರ, ಬೀಜ, ಎಣ್ಣೆ - ಹೀಗೆ ಎಲ್ಲದರ ಮೇಲೆ ಸಬ್ಸಿಡಿಯನ್ನು ತೆಗೆದುಹಾಕಲಾಗಿದೆ. ಇದು ಸಾಲದೆಂಬಂತೆ ಆಹಾರ ಪದಾರ್ಥಗಳನ್ನು (ಉದಾಹರಣೆಗೆ ತೊಗರಿ, ಎಣ್ಣೆ ಇತ್ಯಾದಿ) ಟರ್ಕಿ, ಸ್ವಿಟ್ಜರ್‌ಲ್ಯಾಂಡ್ ಮುಂತಾದ ದೇಶಗಳಿಂದ ಆಮದುಮಾಡಿಕೊಳ್ಳಲಾಗುತ್ತಿದೆ. ಕೇಂದ್ರ ಸರ್ಕಾರದ ಆಮದು ನೀತಿಯನ್ನು ರಾಜ್ಯಸರ್ಕಾರವು ಬೆಂಬಲಿಸುವುದರಿಂದ ಸಕ್ಕರೆ, ಹಾಲು, ಗೋಧಿ, ಎಣ್ಣೆ - ಮುಂತಾದ ವಸ್ತುಗಳೆಲ್ಲಾ ವಿದೇಶದಿಂದ ಮುಕ್ತವಾಗಿ ತರಿಸಿಕೊಳ್ಳುವ ಒಪ್ಪಂದಕ್ಕೆ ಭಾರತವು ಸಹಿ ಹಾಕಿದ ನಂತರ ದೇಶದ ಕೃಷಿ ಕಾರ್ಖಾನೆಗಳೂ ಕೂಡ ನೆಲಕಚ್ಚಿವೆ. ಇದರಿಂದ ಕೆಲಸ ಕಳೆದುಕೊಂಡು ಬೀದಿಗೆ ಬಿದ್ದ ಅಸಂಖ್ಯಾತ ನಿರುದ್ಯೋಗಿಗಳಲ್ಲಿ ಮಹಿಳೆಯರು ಗಣನಿಯ ಸಂಖ್ಯೆಯಲ್ಲಿದ್ದಾರೆ. ಮಹಿಳಾ ಪ್ರಧಾನವಾದ ಟೈಲರಿಂಗ್ ಯೂನಿಟ್‌ಗಳನ್ನು ಮುಚ್ಚಿದ ಕಾರಣದಿಂದ ಕಳೆದ ವರ್ಷ ನೂರಾರು ಮಹಿಳೆಯರು ಕರ್ನಾಟಕದಲ್ಲಿ ಕೆಲಸ ಕಳೆದುಕೊಂಡದ್ದನ್ನು ಕಾಣಬಹುದಾಗಿದೆ.

## ಆರೋಗ್ಯಕ್ಷೇತ್ರ

1991ರಿಂದ ಈಚಿನ ದಿನಗಳಲ್ಲಿ ಭಾರತ ಸರ್ಕಾರವು ವಿಶ್ವಬ್ಯಾಂಕ್, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ಇತ್ಯಾದಿಗಳ ಒತ್ತಾಯಕ್ಕೆ ಮಣಿದು ಖಾಸಗೀಕರಣ, ಉದಾರೀಕರಣ, ಜಾಗತೀಕರಣ ಇತ್ಯಾದಿ ಮಂತ್ರಗಳನ್ನು ಪಠಿಸುತ್ತಾ, ದೇಶದ ಮಾರುಕಟ್ಟೆಯನ್ನು ವಿದೇಶೀ ಉದ್ಯಮಗಳಿಗೆ ಮುಕ್ತವಾಗಿ ತೆರೆದಿರುವ ಸಂದರ್ಭವನ್ನು ದುರುಪಯೋಗಪಡಿಸಿಕೊಂಡು ಹಲವಾರು ವಿದೇಶೀ ಕಂಪೆನಿಗಳು ದೇಶದ ಹಲವಾರು ಸರ್ಕಾರೇತರ ಸಂಸ್ಥೆಗಳ ಸಹಕಾರದಿಂದ ದೇಶದ ಜನರ ಮೇಲೆ ಹಲವಾರು ಅಪಾಯಕಾರಿ ಔಷಧಿಗಳ ಪ್ರಯೋಗದಲ್ಲಿ ನಿರತರಾಗಿ ಭಾರತೀಯರನ್ನು ತಮ್ಮ ಪ್ರಯೋಗಗಳಿಗೆ ಬಲಿಪಶುಗಳನ್ನಾಗಿ ಮಾಡಿವೆ. ಉದಾಹರಣೆಗೆ, ಸಂತಾನ ನಿರೋಧಕವಾಗಿ ಬಂದ ಕ್ವಿನಕ್ರಾನ್‌ನ ಬಳಕೆಯನ್ನೇ ನೋಡಬಹುದು.

ನಮ್ಮ ದೇಶದಲ್ಲಿ ಜನಸಂಖ್ಯಾ ಸಮಸ್ಯೆ ಅತ್ಯಂತ ಮುಖ್ಯ ಸಮಸ್ಯೆಯಾದರೂ ಅದೊಂದೇ ಮುಖ್ಯಕಾರಣವೆಂಬಂತೆ ಮಾತನಾಡುವುದು ಸರಿಯಲ್ಲ. ನಾವು ಆರ್ಥಿಕ, ಸಾಮಾಜಿಕ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳದೆ ಹೊಸ ಸಮಸ್ಯೆಗಳಿಗೆ ಸಿಕ್ಕಿಕೊಳ್ಳುತ್ತಿದ್ದೇವೆ. ಇಲ್ಲಿಯವರೆಗೂ ನಾರ್‌ಪ್ಲಾಂಟ್, ಸಟಿನ್, ಡಿಪೊಪ್ರೊವೇರಾದಂತಹ ಹಾನಿಕಾರಕ ಔಷಧಿಗಳನ್ನು ಬಳಸಿದ್ದು ಸಾಲದೆ, ಕಳೆದ ಕೆಲವು ವರ್ಷಗಳಿಂದ ಕ್ವಿನಕ್ರೆನ್ ಔಷಧಿಯನ್ನು ಸಂತಾನನಿರೋಧಕವಾಗಿ ಬಳಸಲಾಯಿತು. ಈ ಔಷಧಿಯು ವೈಜ್ಞಾನಿಕವಾಗಿ ಇನ್ನೂ ರುಜುವಾತಾಗಿಲ್ಲದೆ ಇನ್ನೂ ಪ್ರಯೋಗದ ಹಂತದಲ್ಲೇ ಇರುವ ಮತ್ತು ಸಾಕಷ್ಟು ಅನುಮಾನಗಳಿಗೆ ಎಡೆಕೊಟ್ಟ ಔಷಧಿ. ಇದನ್ನು ತೃತೀಯ ಜಗತ್ತಿನ ಮಹಿಳೆಯರ ಮೇಲೆ ಪ್ರಯೋಗಿಸುತ್ತಿರುವುದರ ರಹಸ್ಯ ಎಲ್ಲರಿಗೂ ತಿಳಿದದ್ದೇ. ಮೂರನೇ ಜಗತ್ತಿನ ಮಹಿಳೆಯರನ್ನು ಪ್ರಯೋಗದ ಬಲಿಪಶುವನ್ನಾಗಿ ಮಾಡುವ ಇಂತಹ ಔಷಧಿಗಳ ಬಗ್ಗೆ ಹೆಚ್ಚು ಜಾಗರೂಕರಾಗಿರಲೇಬೇಕು.

ಇಲ್ಲಿಯವರೆಗೆ ಆರೋಗ್ಯ ನೀತಿಯನ್ನು ಆರೋಗ್ಯ ಸಚಿವಾಲಯ ರೂಪಿಸುತ್ತಿತ್ತು. ಆದರೆ ಇಂದು ಆರೋಗ್ಯ ನೀತಿ ರೂಪಿಸಲು ವಿಶ್ವಬ್ಯಾಂಕ್ ನಿರ್ಧರಿಸುತ್ತದೆ ಹಾಗೂ ಹಣ ವಿನಿಯೋಗ ಮಾಡಬೇಕಾದ ವಿಧಿವಿಧಾನವನ್ನು ವಿಶ್ವಬ್ಯಾಂಕೇ ಹೇಳುತ್ತದೆ. ಇದರ ಪರಿಣಾಮವಾಗಿ ಆರೋಗ್ಯಕ್ಷೇತ್ರವು ಖಾಸಗಿ ಕ್ಷೇತ್ರದವರ ಕೈಯಲ್ಲಿದೆ ಮತ್ತು ಸರಕಾರೀ ಸೌಲಭ್ಯಗಳು ಕಡಿಮೆಯಾಗುತ್ತಿವೆ. ಬಸಿರು, ಬಾಣಂತನ, ಅಪೌಷ್ಟಿಕತೆಯ ಜೊತೆಗೆ ವೈದ್ಯಕೀಯ ಸೇವೆಯೂ ತುಟ್ಟಿಯಾಗುವುದರಿಂದ ಮಹಿಳೆಯರ ಮರಣ ಸಂಖ್ಯೆ ಹೆಚ್ಚುತ್ತದೆ. ನಾವು ಒಪ್ಪಿಕೊಂಡಿರುವ ಜಾಗತಿಕ ನೀತಿಯಿಂದಾಗಿ ಹೊಸ ಪೇಟೆಂಟ್ ಕಾಯಿದೆಗಳು ಜಾರಿಗೆ ಬಂದು ಔಷಧಿ ಬೆಲೆಗಳು ಗಗನಕ್ಕೇರಿವೆ. ಅಪಾಯಕಾರಿ ಔಷಧಗಳು ಮತ್ತು ಹಾಗೂ ಸೌಂದರ್ಯವರ್ಧಕಗಳು ನಮ್ಮ ಮಾರುಕಟ್ಟೆಗೆ ಬರಲಾರಂಭಿಸಿವೆ. ಈ ಪದಾರ್ಥಗಳನ್ನು ರೋಗಿಗಳು ಬಳಸುವಂತೆ ಮಾಡಲು ಔಷಧಿ ಕಂಪೆನಿಗಳು ಡಾಕ್ಟರನ್ನು ಪುಸಲಾಯಿಸಬಹುದು. ಆಗ ರೋಗಿಗಳು ಅನಗತ್ಯ ಹಾಗೂ ಹಾನಿಕಾರಕ ಔಷಧಿಗಳನ್ನು ಕೊಳ್ಳಬೇಕಾಗುತ್ತದೆ.

**ಸಾಂಸ್ಕೃತಿಕವಾಗಿ**

ಇಂದಿನ ಜಾಗತೀಕರಣದ ಸಂದರ್ಭದಲ್ಲಿ ಪತ್ರಿಕೆಗಳು ಮತ್ತು ಮಾಧ್ಯಮಗಳು ಸಾಮಾಜಿಕ ಪ್ರಗತಿಗೆ, ಎಲ್ಲ ವಿಧವಾದ ಅಸಮಾನತೆಗಳ ನಿವಾರಣೆಗೆ ಒಂದು ವಾಹಕವಾಗಿ ಒದಗಬೇಕಾದದ್ದು, ಅದರ ಬದಲಿಗೆ ಬಂಡವಾಳಶಾಹಿಯ ಆಕ್ರಮಣಕ್ಕೆ ಒಂದು ಸಾಧನವಾಗಿದೆ. ಈ ಆಕ್ರಮಣಶೀಲತೆಯ ಎಲ್ಲ ದುಷ್ಪರಿಣಾಮಗಳನ್ನು ಅವು ಮಹಿಳೆಯರ ಬಗ್ಗೆ, ಮಹಿಳಾ ಸಮಸ್ಯೆಗಳ ಬಗ್ಗೆ ತಳೆಯುವ ವ್ಯಾಪಾರಿ ಧೋರಣೆಯಲ್ಲಿ ಕಾಣಬಹುದಾಗಿದೆ. ಈ ಮಾಧ್ಯಮಗಳಲ್ಲೂ ಸ್ತ್ರೀಯೇ ಒಂದು ಸರಕಾಗುತ್ತಿದ್ದಾಳೆ. ಹೆಣ್ಣಿನ ಕೌಟುಂಬಿಕ ಸಾಂಪ್ರದಾಯಿಕ ನೆಲೆಗಳಿಗೇ ಮತ್ತು ರೂಢಿಗತ ಮೌಲ್ಯಗಳಿಗೇ ಹೆಚ್ಚು ಒತ್ತು ಕೊಡುವ ಸೀತೆ, ಸಾವಿತ್ರಿಯರಂತಹ ಪಾತ್ರಗಳನ್ನು ಟಿವಿ ಚಾನೆಲ್‌ಗಳ ಮೂಲಕ ಕೊಡುತ್ತಾ, ಅದರ ಜೊತೆ ಜೊತೆಯಲ್ಲಿಯೇ Fashion TVಯ ಮೂಲಕ ಹೆಣ್ಣಿನ ಸೌಂದರ್ಯದ ದೈಹಿಕ ರೂಪಕ್ಕೆ ಹೆಚ್ಚು ಒತ್ತಡ ಕೊಡಲಾಗುತ್ತಿದೆ.

ವಿಶ್ವಸುಂದರಿಯರ ಆಯ್ಕೆ ನಡೆಸುವ ವಿಶ್ವಸುಂದರಿ ಸ್ಪರ್ಧೆಗಳ ಮೂಲಕ ಸೌಂದರ್ಯವರ್ಧಕ ಸರಕುಗಳಿಗೆ ಗಿರಾಕಿಗಳನ್ನು ಸೃಷ್ಟಿಸುವುದರ ಜೊತೆಗೆ ಜನಸಾಮಾನ್ಯರ ಅಭಿರುಚಿಯ ಪಲ್ಲಟಗಳನ್ನು ಮಾಡುವ ಸಾಮರ್ಥ್ಯವನ್ನು ಬಹುರಾಷ್ಟ್ರೀಯ ಕಂಪೆನಿಗಳು ಬಿರುಸಿನಿಂದ ನಡೆಸಿವೆ. ದೊಡ್ಡ ನಗರಗಳಲ್ಲಿ ನಡೆಯುತ್ತಿದ್ದ ಸೌಂದರ್ಯಸ್ಪರ್ಧೆಗಳು ಈಗ ಶಾಲಾ ಕಾಲೇಜುಗಳಲ್ಲಿ ಜಿಲ್ಲೆ, ತಾಲ್ಲೂಕು, ಹಳ್ಳಿಗಳಲ್ಲಿ ಕೂಡ ನಡೆಯುತ್ತಿವೆ. ಇವೆಲ್ಲದರಿಂದ ಸೌಂದರ್ಯದ ವ್ಯಾಖ್ಯಾನವೂ ಬದಲಾಗುತ್ತಾ ನಮ್ಮ ಹೆಂಗಸರು ತಮಗೆ ಮಿದುಳಿದೆಯೆಂಬ, ಅದರ ಹಿರಿಮೆಯ ಅವಶ್ಯಕತೆಯನ್ನು ಮರೆತಂತಾಗಿದೆ.

ರಾಷ್ಟ್ರಗಳ ಎಲ್ಲೆಗಳನ್ನು ಮೀರಿ ವಿಶ್ವವನ್ನೇ ಒಂದು ಕುಟುಂಬವನ್ನಾಗಿ ಮಾರುಕಟ್ಟೆ ಸಂಸ್ಕೃತಿಯ ಮೂಲಕ ಮಾಡುತ್ತೇವೆಂದು ಹೊರಟವರಿಗೆ ಇಂದು ಧರ್ಮಗಳೇ ಭದ್ರಕೋಟೆಗಳಾಗಿವೆ. ಧಾರ್ಮಿಕ ಮೂಲಭೂತವಾದ ಹೆಣ್ಣಿನ ಮನಸ್ಸು ಮತ್ತು ದೇಹದ ಮೇಲೆ ದಾಳಿ ನಡೆಸಿವೆ. ತಾಲಿಬಾನ್‌ನ ಬುರ್ಖಾ ಇಂದು ನಮ್ಮಲ್ಲೂ ಹೈದರಾಬಾದ್, ಮುಂಬಯಿ, ರಾಯಚೂರು, ಬೆಂಗಳೂರಿಗೂ ಧಾವಿಸಿ ಬಂದಿವೆ. ಶಿವಸೇನೆಯ ದಾಂಧಲೆಗಳು, ಹಿಂದೂತ್ವದ ಪರಾಕ್ರಮದ ಹೆಸರಿನ ಭಯೋತ್ಪಾದನೆ ಹೆಂಗಸರ ಅಸ್ತಿತ್ವವನ್ನೇ ನಗೆಪಾಟಲು ಮಾಡಿದೆ. ಏಕತೆಯನ್ನು ಸ್ಥಾಪಿಸುವ ಯಾಜಮಾನ್ಯ ಗುಣ ಬಹುಸಂಸ್ಕೃತಿಯ ಮೂಲಬೇರಿಗೆ ಆತಂಕಕಾರಿ. ಅಮೆರಿಕೆಯಲ್ಲಿ ಯಾವುದು ಸಂಸ್ಕೃತಿಯೋ ಅದೇ ಇಲ್ಲಿಗೂ ಸಂಸ್ಕೃತಿಯಾಗುತ್ತದೆ. ಇದೊಂದು ಅತಿಯಾದರೇ ಭಾರತಕ್ಕೊಂದೇ ಸಂಸ್ಕೃತಿಯಿರಬೇಕೆಂದು ಹೊರಡುವ ಹಿಂದೂವಾದಿಗಳ ತರ್ಕವು ಅಷ್ಟೇ ಅರ್ಥವಿಲ್ಲ. ವ್ಯಾಲೆಂಟೀನ್ ಡೇ, ಮದರ್ಸ್ ಡೇಗಳನ್ನು ಹಿಂದೆಂದೂ ಕಂಡಿರಲಿಲ್ಲ. ಈ ಆಚರಣೆಗಲು ಮೇಲ್ನೋಟಕ್ಕೆ ಸಾಂಸ್ಕೃತಿಕವಾಗಿ ಕಂಡರೂ ಆಳದಲ್ಲಿ ವ್ಯಾಪಾರೀ ದೃಷ್ಟಿಯವೇ.

ವಿಶ್ವವನ್ನೇ ಒಂದು ಕುಟುಂಬದಂತೆ ಭಾವಿಸಬೇಕೆಂದು ಭಾರತೀಯ ಸಂಸ್ಕೃತಿ ಹೇಳಿತು. ಆದರೆ ಇಂದಿನ ವಿಶ್ವವೆಂಬ ಹಳ್ಳಿಯ ಶ್ರೇಣೀಕರಣದಲ್ಲಿ ಭಾರತ ಎಲ್ಲಿದೆ? ಯಾರ ಮಾತು ಕೇಳಬೇಕು? ಯಾರಿಗೆ ನಿಷ್ಠವಾಗಿರಬೇಕು - ಇವು ನಾವು ಹಾಕಿಕೊಳ್ಳಬೇಕಾದ ಪ್ರಶ್ನೆಗಳು.

- ಗೌರಿ



★ ★ ★

RNI No. 45577/88

## ಶಾಂತಿ ಜ್ಯೋತಿ ಬೆಳಗಲಿ

**ಬೆಳಗಲಿ ಬೆಳಗಲಿ ಶಾಂತಿಜ್ಯೋತಿಯು**
**ಆರಲಿ ಆರಲಿ ಕೋಮುಜ್ವಾಲೆಯು ॥ ಪ ॥**

ಹಿಮಾಲಯದ ನೆತ್ತಿಯಲ್ಲಿ
ಕಾಶ್ಮೀರದ ಭಿತ್ತಿಯಲ್ಲಿ
ಅಸ್ಸಾಮಿನ ಕಾಡಿನಲ್ಲಿ
ಗುಜರಾತಿನ ಬೀಡಿನಲ್ಲಿ

ಹೊತ್ತಿ ಉರಿವ ಬೆಂಕಿ ಆರಿ ತಣ್ಣಗಾಗಲಿ
ಗಾಂಧಿ ನಾಡಿನಲ್ಲಿ ಮತ್ತೆ ಶಾಂತಿ ನೆಲೆಸಲಿ
ದ್ವೇಷ ರೋಷ ಆಕ್ರೋಶದ ಬೆಂಕಿ ಆರಲಿ
**ಬೆಳಗಲಿ ಬೆಳಗಲಿ ಶಾಂತಿ ಜ್ಯೋತಿಯು**
**ಆರಲಿ ಆರಲಿ ಕೋಮುಜ್ವಾಲೆಯು ॥ 1 ॥**

ಗೋಧ್ರಾದ ಮಡಿಲಿನಲ್ಲಿ
ನಿರಾಶ್ರಿತರ ಗುಡಿಸಲಿನಲ್ಲಿ
ಸಬರಮತಿಯ ನೆಲದಲ್ಲಿ
ಗಾಂಧಿತಾತ ನೆಲೆಸಿದಲ್ಲಿ

ದುಡಿವ ಹಿಂದೂ ಮುಸಲ್ಮಾನರೊಂದುಗೂಡಲಿ
ಆರದಿರಲಿ ಪ್ರೀತಿದೀಪ ಕಣ್ಣಗೂಡಲಿ
ಎದೆಯ ಕೊಳೆಗಳನ್ನು ಅಶ್ರುಧಾರೆ ತೊಳೆಯಲಿ
**ಬೆಳಗಲಿ ಬೆಳಗಲಿ ಪ್ರೀತಿ ಜ್ಯೋತಿಯು**
**ಆರಲಿ ಆರಲಿ ಕೋಮು ಜ್ವಾಲೆಯು ॥ 2 ॥**

ಬಸಿರ ಒಡಲ ತಿವಿದರಲ್ಲಿ
ಕತ್ತಿ ಹಿರಿದು ಕೊಂದರಲ್ಲಿ
ತಾಯಿತಂಗಿ ಬೆತ್ತಲಲ್ಲಿ
ನಡುಬೀದಿಯ ಚೌಕದಲ್ಲಿ

ಮನುಜ ಮತವು ಮತ್ತೆ ಇಲ್ಲಿ ಬೆಳಕ ಕಾಣಲಿ
ಸ್ನೇಹ, ಸಹನೆ, ಶಾಂತಿ, ಪ್ರೀತಿ ಪುಟಿದು ಗೆಲ್ಲಲಿ
ಧರೆಯ ಕಲೆಗಳನ್ನು ಮೇಘಧಾರೆ ತೊಳೆಯಲಿ
ಬೆಳಗಲಿ ಬೆಳಗಲಿ ಮೈತ್ರಿ ಜ್ಯೋತಿಯು
ಆರಲಿ ಆರಲಿ ಕೋಮು ಜ್ವಾಲೆಯು ॥ 2 ॥

**- ನೇಮಿಚಂದ್ರ**

(ಕವಿ ಹೆಚ್. ಎಸ್. ವೆಂಕಟೇಶಮೂರ್ತಿಯವರ ಕ್ಷಮೆ ಕೋರಿ)

"Achala" 108, Skyline Surabhi,
14-9, Vidyapeeta Road, BSK III
Stage,
Bangalore - 560 085

To :

Smt/Sri

CPMG/KA/BG-8/2002
Book-Post/News Letter